# ಸಣ್ಣ ನೀರಾವರಿ ಯೋಜನೆಗಳು
# ಅಥಣಿ ತಾಲೂಕಿನ ನೀರಾವರಿ ಅಭಿವೃದ್ಧಿ ಅಧ್ಯಯನ

(ಅಭಿವೃದ್ಧಿ ಅಧ್ಯಯನ ವಿಷಯದಲ್ಲಿ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು

**ಆನಂದ.ಈಶ್ವರ.ಲಗಳಿ**

ಮಾರ್ಗದರ್ಶಕರು

**ಡಾ. ಸಿ.ಆರ್.ಗುಡಸಿ**

ಅಭಿವೃದ್ಧಿ ಅಧ್ಯಯನ ವಿಭಾಗ

ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ, ಹಾರೂಗೇರಿ

**ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ,**
**ಹಾರೂಗೇರಿ - ೫೯೧ ೨೨೦**

**ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ ವಿದ್ಯಾರಣ್ಯ,**
**ಹಂಪಿ**

**೨೦೧೫**

ಸಣ್ಣ ನೀರಾವರಿ ಯೋಜನೆಗಳು

# ಅಥಣಿ ತಾಲೂಕಿನ ನೀರಾವರಿ ಅಭಿವೃದ್ಧಿ ಅಧ್ಯಯನ

(ಅಭಿವೃದ್ಧಿ ಅಧ್ಯಯನ ವಿಷಯದಲ್ಲಿ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ನಿಬಂಧ)



ಸಂಶೋಧಕರು
ಆನಂದ.ಈಶ್ವರ.ಲಗಳಿ

ಮಾರ್ಗದರ್ಶಕರು
ಡಾ. ಸಿ.ಆರ್.ಗುಡಸಿ
ಅಭಿವೃದ್ಧಿ ಅಧ್ಯಯನ ವಿಭಾಗ
ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ, ಹಾರೂಗೇರಿ

ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ,

ಹಾರೂಗೇರಿ – ೫೯೧ ೨೨೦

ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ ವಿದ್ಯಾರಣ್ಯ, ಹಂಪಿ

೨೦೧೫

# ಘೋಷಣಾ ಪತ್ರ

**ಸಣ್ಣ ನೀರಾವರಿ ಯೋಜನೆಗಳು ಅಥಣಿ ತಾಲೂಕಿನ ನೀರಾವರಿ ಅಭಿವೃದ್ಧಿ ಅಧ್ಯಯನ** ನಿಬಂಧವನ್ನು ಡಾ. ಸಿ.ಆರ್.ಗುಡಸಿ ಅವರ ಮಾರ್ಗದರ್ಶನದಲ್ಲಿ ನಾನು ಸಿದ್ಧಪಡಿಸಿದ್ದೇನೆ. ಹಾರೂಗೇರಿಯ ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರದ ಮೂಲಕ ಕನ್ನಡ ವಿಶ್ವವಿದ್ಯಾಲಯ, ಹಂಪಿ. ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ಇಡಿಯಾಗಿ ಇಲ್ಲವೇ ಬಿಡಿಯಾಗಿ ಎಲ್ಲಿಯೂ ಪ್ರಕಟಿಸಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸ್ಥಳ : ಹಾರೂಗೇರಿ

ದಿನಾಂಕ : 27/07/2015

Aegali

**ಆನಂದ ಈಶ್ವರ ಲಗಳಿ**

ಎಂ.ಫಿಲ್ ವಿದ್ಯಾರ್ಥಿ
ಶ್ರೀ ಬಿ.ಆರ್. ದರೂರ,
ಸಂಶೋಧನಾ ಕೇಂದ್ರ, ಹಾರೂಗೇರಿ.

# ದೃಢೀಕರಣ ಪತ್ರ

**ಆನಂದ ಈಶ್ವರ ಲಗಳಿ** ಇವರು **ಸಣ್ಣ ನೀರಾವರಿ ಯೋಜನೆಗಳು ಅಥಣಿ ತಾಲೂಕಿನ ನೀರಾವರಿ ಅಭಿವೃದ್ಧಿ ಅಧ್ಯಯನ** ಎಂಬ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದಾರೆ. ಹಾರೂಗೇರಿ ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರದ ಮೂಲಕ ಕನ್ನಡ ವಿಶ್ವ ವಿದ್ಯಾಲಯ, ಹಂಪಿ. ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿದ್ದು ಪ್ರಸ್ತುತ ನಿಬಂಧವನ್ನು ಇವರು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವದಿಲ್ಲ. ಈ ಮೊದಲು ಎಲ್ಲಿಯೂ ಇಡಿಯಾಗಿ ಇಲ್ಲವೇ ಬಿಡಿಯಾಗಿ ಎಲ್ಲಿಯೂ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ಹಾರೂಗೇರಿ

ದಿನಾಂಕ : 27/07/2015

ಮಾರ್ಗದರ್ಶಕರು

ಡಾ. ಸಿ.ಆರ್.ಗುಡಸಿ
ಶ್ರೀ ಬಿ.ಆರ್. ದರೂರ
ಸಂಶೋಧನಾ ಕೇಂದ್ರ, ಹಾರೂಗೇರಿ.

# ಕೃತಜ್ಞತೆ

ಈ ನಿಬಂಧವನ್ನು ಸಂಶೋಧನೆ ಮಾಡಿ ಸಿದ್ದಪಡಿಸುವಲ್ಲಿ ಮಾರ್ಗದರ್ಶಕರಾಗಿ ಮುಕ್ತ ಮನಸ್ಸಿನಿಂದ ಸೂಕ್ತವಾದ ಸಲಹೆ ಸೂಚನೆಗಳನ್ನು ನೀಡಿರುವಂತಹ ಡಾ.ಸಿ.ಆರ್.ಗುಡಸಿ, ಮುಖ್ಯಸ್ಥರು, ಅಭಿವೃದ್ಧಿ ಅಧ್ಯಯನ ವಿಭಾಗ, ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ ಹಾರೂಗೇರಿ ಇವರಿಗೆ ಅತ್ಯಂತ ಚಿರಋಣಿಯಾಗಿದ್ದೇನೆ.

ನನ್ನ ಈ ಅಧ್ಯಯನಕ್ಕೆ ಸಹಕಾರ ನೀಡಿದ ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ, ಹಾರೂಗೇರಿ. ಸಂಸ್ಥೆಯ ಸಂಯೋಜಕರಾದ ಡಾ. ವ್ಹಿ.ಎಸ್.ಮಾಳಿ ಹಾಗೂ ಕೇಂದ್ರದ ಸಿಬ್ಬಂದಿ ಶ್ರೀ ಶಂಕರ ಘಟನಟ್ಟಿ ಅವರಿಗೆ ಅಭಾರಿಯಾಗಿದ್ದೇನೆ.

ನನ್ನ ಸಂಶೋಧನಾ ಚಟುವಟಿಕೆ ಪ್ರಾರಂಭವಾಗಬೇಕು ಎಂದು ತುಂಬು ಹೃದಯದಿಂದ ಹರಸಿ ಹೆಜ್ಜೆ ಹಜ್ಜೆಗೂ ಪ್ರೋತ್ಸಾಹ ನೀಡಿದ ಹಿರಿಯ ರೈತರು ಹಾಗೂ ನನ್ನ ತಂದೆಯವರಾದ ಈಶ್ವರ ಭೀಮಪ್ಪಾ ಲಗಳಿ, ತಾಯಿ ಶಾಂತಾ ಈಶ್ವರ ಲಗಳಿ ಇವರುಗಳ ಆಶೀರ್ವಾದ ಮತ್ತು ಮಡದಿ ವಾಣಿಶ್ರೀ ಪ್ರೋತ್ಸಾಹ ಇವರುಗಳಿಗೆ ಮೊದಲಿಗೆ ಅನಂತ ಕೃತಜ್ಞತೆಗಳು.

ನನ್ನ ಈ ಅಧ್ಯಯನಕ್ಕೆ ಪ್ರೋತ್ಸಾಹಿಸಿ ನನ್ನ ಹತ್ತು ಹಲವು ಜವಾಬ್ದಾರಿಗಳನ್ನು ತಾವು ಪೂರೈಸಿ ಸಂಪ್ರೀತ ಮನಸ್ಸಿನಿಂದ ಬೆಂಬಲ ನೀಡಿದ ನನ್ನ ಸಹೋದರರಾದ ಶ್ರೀಶೈಲ, ರಮೇಶ, ಗಣಪತಿ, ಅತ್ತಿಗೆಯರಾದ ಸುನೀತಾ, ಗೀತಾ, ರಾಜಶ್ರೀ ಇವರಿಗೂ ನನ್ನ ಹೃದಯ ಪೂರ್ವಕ ಕೃತಜ್ಞತೆಗಳು.

ಎಂ.ಫಿಲ್ ಅಧ್ಯಯನ ಮಾಡಲು ಪ್ರೇರಪಣೆ ನೀಡಿ ಸಂಶೋಧನೆಯತ್ತ ಆಸಕ್ತಿ ಮೂಡುವಂತೆ ಮಾಡಿದ ಗೆಳೆಯರು ಹಾಗೂ ವೃತ್ತಿ ಬಾಂಧವರು ಆದ ಶ್ರೀ ಬಸವರಾಜ ಜನಗೌಡ, ಶ್ರೀ ಭರಮು ಅಲಗೂರ, ಶ್ರೀ ಬಸವರಾಜ ಕನಮಡಿ, ಶ್ರೀ ರಾಮಣ್ಣಾ ದೊಡನಿಂಗಪ್ಪಗೋಳ, ಶ್ರೀ ರವಿ ಬಡಿಗೇರ, ಶ್ರೀ ಸಿದ್ರಾಮ ಕಾಂಬಳೆ, ಶ್ರೀ ಶ್ರೀಶೈಲ ಇಂಗಳಿ, ಶ್ರೀ ಆನಂದ ಅವಟಿ, ಶ್ರೀ ಶ್ರೀಕಾಂತ ಕಾಂಬಳೆ, ಶ್ರೀ ಬಸವರಾಜ ಲಾಲಸಿಂಗಿ, ಇವರಿಗೆ ನನ್ನ ಉನ್ನತ ಮಟ್ಟದ ಕನಸುಗಳನ್ನು ಸಾಕಾರಗೊಳಿಸಲು ಸತತ ಓದುವುದು ಅವಶ್ಯ ಎಂದು ಅಧ್ಯಯನಕ್ಕೆ ಪ್ರೋತ್ಸಾಹಿಸಿದ ಎಲ್ಲರಿಗೂ ನನ್ನ ತುಂಬು ಹೃದಯದ ಕೃತಜ್ಞತೆಗಳು.

ಈ ನಿಬಂಧದ ಮಾಹಿತಿ ಕ್ರೋಢೀಕರಣದಲ್ಲಿ ಸಹಾಯ ಮಾಡಿ ಸ್ನೇಹಿತರಾದ ರಾಜೇಶ ಬುಟಾಳಿ, ಮಲ್ಲಪ್ಪಾ ಹಳ್ಳದಮಳ, ಜ್ಯೋತಿ ಅಪರಾಜ, ಶಿವಾನಂದ ಲಂಗೋಟಿ,

ರಾಜು ಹಳ್ಳದಮಳ, ಮಹಾನಿಂಗ ಲಂಗೋಟಿ ಶಿವಾನಂದ ಹಳ್ಳದಮಳ, ಹಾಗೂ ರಮೇಶ ಜೋಗಾಣಿ, ಇವರಿಗೂ ಸಮೀಕ್ಷೆಯ ಸಂದರ್ಭದಲ್ಲಿ ಸಹಾಯ ಮಾಡಿ ವಿಠ್ಠಲ ಹುಚ್ಚನವರ, ಅತ್ತೆಯಾದ ಮಹಾದೇವಿ ಹುಚ್ಚನವರ, ಅಳಿಯನಾದ ವಿನೋದ ಇವರೆಲ್ಲರಿಗೂ ನನ್ನ ತುಂಬು ಹೃದಯದ ಅನಂತ ಅನಂತ ಕೃತಜ್ಞತೆಗಳು.

ಈ ಸಂಶೋಧನಾ ನಿಬಂಧವನ್ನು ಬೆರಳಚ್ಚು ಮಾಡುವಲ್ಲಿ ಸಹಾಯ ಮಾಡಿದ ಗೆಳೆಯರಾದ ವಿಜಯ ರಾಯಣ್ಣವರ, ಹಾಗೂ ರಾಘು ಜಾಧವ ಇವರಿಗೂ ನನ್ನ ತುಂಬು ಹೃದಯದ ಕೃತಜ್ಞತೆಗಳು.

ಈ ಸಂಶೋಧನಾ ಸಮಯದಲ್ಲಿ ಇಲಾಖೆಯಿಂದ ದೊರೆಯಬೇಕಾದ ಮಾಹಿತಿ ನೀಡುವಲ್ಲ ಸಹಕರಿಸಿದ ಶ್ರೀ ಮುರಗೇಶ ಬಾನಿ, ಶ್ರೀ ಉದಯ ಪಾಟೀಲ, ಶ್ರೀ ಬಸವರಾಜ ಇಟ್ನಾಳ, ಶ್ರೀ ಎಸ್.ವ್ಹಿ ಮಾಹುಲಿ, ಶ್ರೀ ವ್ಹಿ ಎಮ್. ರಾಠೋಡ, ಶ್ರೀ ಪ್ರವಿಣಕುಮಾರ ಆರ್, ಶ್ರೀ ರಾವುಸಾಬ ಐಹೋಳೆ, ಶ್ರೀ ಎಸ್.ವಾಯ್.ರತ್ನಳಿ, ಶ್ರೀ ಬಸವರಾಜ ಕಮತಗಿ, ಶ್ರೀ ವೀರೇಶ ದೇಸಾಯಿ ಇವರಿಗೂ ನನ್ನ ಹೃದಯ ಪೂರ್ವಕ ಕೃತಜ್ಞತೆಗಳು.

ಈ ಅಧ್ಯಯನ ಯಶಸ್ವಿಯಾಗಲು ಮಾಹಿತಿ ನೀಡಿದ ಎಲ್ಲ ಕೃಷಿಯಲ್ಲಿ ನೀರಾವರಿ ಬಳಕೆಮಾಡತ್ತಿರುವ ನನ್ನ ಸಹೋದರರೂ ಹಾಗೂ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಅಧ್ಯಯನಕ್ಕೆ ಸಹಕರಿಸಿದ ನನ್ನ ಎಲ್ಲ ಆತ್ಮೀಯರಿಗೂ, ಸ್ನೇಹಿತರಿಗೂ ತುಂಬು ಹೃದಯದ ಕೃತಜ್ಞತೆಗಳು

ಸ್ಥಳ : ಹಾರೂಗೇರಿ

ದಿನಾಂಕ :

ಸಂಶೋಧನಾ ವಿದ್ಯಾರ್ಥಿ

**ಆನಂದ ಈಶ್ವರ ಲಗಳಿ**

# ಪರಿವಿಡಿ

# ಕೋಷ್ಟಕಗಳು

# ಅಧ್ಯಾಯ – ಒಂದು

# ಪ್ರವೇಶ

## ಅಧ್ಯಯನದ ಮಹತ್ವ, ಉದ್ದೇಶಗಳು, ವಿಧಾನ, ವ್ಯಾಪ್ತಿ, ವಿನ್ಯಾಸ

೧.೧ ಪ್ರಸ್ತಾವನೆ

೧.೨ ಅಧ್ಯಯನದ ಮಹತ್ವ

೧.೩ ಅಧ್ಯಯನದ ಉದ್ದೇಶಗಳು

೧.೪ ಅಧ್ಯಯನದ ವಿಧಾನ

೧.೫ ಅಧ್ಯಯನದ ವ್ಯಾಪ್ತಿ

೧.೬ ಅಧ್ಯಯನದ ವಿನ್ಯಾಸ

# ಅಧ್ಯಯನದ ಮಹತ್ವ, ಉದ್ದೇಶಗಳು, ವಿಧಾನ, ವ್ಯಾಪ್ತಿ, ವಿನ್ಯಾಸ

## ೧.೧ ಪ್ರಸ್ತಾವನೆ.

ಭಾರತವು ಒಂದು ಕೃಷಿ ಪ್ರಧಾನವಾದ ರಾಷ್ಟ್ರವಾಗಿದೆ. ಆದರೆ ಆ ಕೃಷಿಗೆ ಪ್ರಧಾನವಾದ ಅಂಶ ಎಂದರೆ ನೀರು. ಮುಖ್ಯವಾಗಿ ಎಲ್ಲಾ ಸಂಪನ್ಮೂಲಗಳಲ್ಲಿ ಅತ್ಯಂತ ಶ್ರೇಷ್ಠ ಸಂಪನ್ಮೂಲ ನೀರು ಎಂದು ಹೇಳುತ್ತೇವೆ. ವಿಶ್ವದಲ್ಲಿ ಇರುವ ೮೪ ಸಾವಿರ ಕೋಟಿ ಜೀವರಾಶಿಗಳಿಗೆ ಬದುಕಲು ನೀರು ಬೇಕು. ಒಂದು ಜೀವಿ ಜಗತ್ತಿನಲ್ಲಿ ಬದುಕಬೇಕಾದರೆ ಆಹಾರ ಮತ್ತು ನೀರು ಬೇಕೆ ಬೇಕು. ಕೆಲವು ಸಲ ಆಹಾರ ಇಲ್ಲವಾದರೂ ಜೀವಿ ಉಳಿಯಬಹುದು. ಆದರೆ ನೀರು ಇಲ್ಲದಿದ್ದರೆ ಜೀವಿ ಉಳಿಯಲಾರದು. ನಮ್ಮದು ಮುಂದುವರೆಯುತ್ತಿರುವ ರಾಷ್ಟ್ರ ಇಲ್ಲಿ ನೀರಿನ ಅವಶ್ಯಕತೆಯಿಲ್ಲಾ ಎನ್ನುವ ಮಾತು ಹೇಳುವಹಾಗಿಲ್ಲ. ಏಕೆಂದರೆ ಯಾವುದೇ ಒಂದು ರಾಷ್ಟ್ರ ಹೊಸ ಹೊಸ ಯೋಜನೆಗಳ ಮೂಲಕ ಹೊಸದಾಗಿ ಇರುವ ಯಂತ್ರೋಪಕರಣಗಳನ್ನು ಉಪಯೋಗಿಸಿ ವಸ್ತುಗಳನ್ನು ಉತ್ಪಾದಿಸಬಹುದೆ ವಿನಃ ನೀರನ್ನು ಉತ್ಪಾದಿಸಲು ಸಾಧ್ಯವಿಲ್ಲ.

ಮನೆಗೆ ವಲೆ ಬೇಕು
ಮನುಷ್ಯನಿಗೆ ತಲೆ ಬೇಕು
ಮಾತಿಗೆ ಬೆಲೆ ಬೇಕು
ಜೀವಿಗೆ ನೀರು ಬೇಕು,

ಎಂಬ ಈ ಮೇಲಿನ ಚುಟುಕಿನಂತೆ ಯಾವುದನ್ನೇ ಮಾಡಲಿ ಮೊದಲು ನಾವು ನಮ್ಮ ಜೀವ ಉಳಿಸಿಕೊಂಡು ಸಾಧನೆ ಮಾಡಬೇಕು, ಆದರೆ ಆ ಜೀವ ಉಳಿಯಲು ನೀರು ಬೇಕು. ಮಳೆಯಿಂದ ದೊರೆಯುವ ನೀರನ್ನು ಹೆಚ್ಚು ಹೆಚ್ಚಾಗಿ ಸಂಗ್ರಹಿಸಿ, ಅದನ್ನು ವ್ಯರ್ಥಮಾಡದೆ ಸರ್ಮಪಕವಾಗಿ ಉಪಯೋಗಿಸಿ, ಮುಂದಿನ ಜೀವರಾಶಿಗಳಿಗೆ ನಾವು ನೀಡುವ ನೀರು ಒಂದು ಕಾಣಿಕೆಯಾಗಬೇಕೆ? ವಿನಃ ಕೊರತೆಯಾಗಬಾರದು.

ನೀರು ಒಂದು ಸಂಪನ್ಮೂಲವಾದ ವಸ್ತು ಆ ನೀರನ್ನು ನಾವು ಪ್ರತಿ ದಿನ ಬಳಸುವ ನೀರಿನ ಒಂದು ಸಣ್ಣ ಮಾದರಿ ವಿಧಾನ ಇಲ್ಲಿ ನೋಡಬಹುದು.

| ಅ.ನಂ | ನೀರಿನ ಬಳಕೆ | ಪ್ರತಿಯೊಬ್ಬರಿಗೆ ಲೀಟರ್‌ಗಳಲ್ಲಿ |
|---|---|---|
| ೧ | ಕುಡಿಯಲು | ೩ |
| ೨ | ಅಡುಗೆಗೆ | ೪ |
| ೩ | ಸ್ನಾನಕ್ಕೆ | ೨೦ |

| ೪ | ಶೌಚಾಲಯಕ್ಕೆ | ೪೦ |
|---|---|---|
| ೫ | ಬಟ್ಟೆ ಒಗೆಯುವುದಕ್ಕೆ | ೨೫ |
| ೬ | ಪಾತ್ರೆ ತೊಳೆಯುವುದಕ್ಕೆ | ೨೦ |
| ೭ | ಇತರೆ ಉಪಯೋಗಕ್ಕಾಗಿ | ೨೩ |

**ಒಟ್ಟು = ೧೩೫ ಲೀಟರ್**

ಒಬ್ಬ ವ್ಯಕ್ತಿ ಪ್ರತಿ ದಿನಕ್ಕೆ ೧೩೫ ಲೀಟರ್ ನೀರನ್ನು ಬಳಸುತ್ತಾನೆ.[೧] ಹಾಗೆ ನಮ್ಮ ಭಾರತ ದೇಶದಲ್ಲಿ ಇರುವ ಜನ ಸಂಖ್ಯೆಗೆ ಗುಣಿಸಿದಾಗ ಒಂದು ದಿನಕ್ಕೆ ಭಾರತ ದೇಶದಲ್ಲಾಗುವ ನೀರಿನ ಬಳಕೆ ನಮಗೆ ದೊರೆಯುತ್ತದೆ. ಇದು ವ್ಯಕ್ತಿಗೆ ಮಾತ್ರ ಸಿಮೀತವಾಗಿದೆ. ಆದರೆ ಇನ್ನೂ ನಾವು ನಮ್ಮ ಕೃಷಿ, ಕೈಗಾರಿಕೆಗೆ, ಪ್ರಾಣಿಗಳಿಗೆ ಹಾಗೂ ನಮ್ಮ ಜೀವನ ನಡೆಸಲು ಬೇಕಾಗುವ ವಸ್ತುಗಳನ್ನು ಬಳಸಲು, ತೊಳೆಯಲು ನೀರನ್ನು ಬಳಸುತ್ತೇವೆ. ಹೀಗೆ ಇನ್ನೂ ಹೆಚ್ಚಿನ ಪ್ರಮಾಣ ನೀರನ್ನು ಬಳಸುತ್ತಾ ಹೋದರೆ ನಮ್ಮ ಮುಂದಿನ ಜೀವ ರಾಶಿಗೆ ನಾವು ನೀರನ್ನು ನೀಡದೆ ಇರುವ ಪ್ರಸಂಗ ಬರಬಹುದು. ಹಾಗೂ ಕೈಗಾರಿಕೆಯಿಂದ ಬರುವ ಕಲುಷಿತ ನೀರು ಪುನಃ ಬಳಕೆಯಾಗಿ ಉಪಯೋಗಿಸದಿದ್ದರೆ. ಜಲ ಮಾಲಿನ್ಯದಿಂದ ಹಲವಾರು ರೋಗಗಳಿಗೆ ಬಲಿಯಾಗಿ ಪ್ರಾಣಿ ಸಂಕುಲ ನಾಶವಾಗಬಹುದು. ಜಲ ಮಾಲಿನ್ಯ ತಡೆಗಟ್ಟಿ ನೀರನ್ನು ಶುದ್ಧಿಕರಿಸಿ ಮರು ಬಳಕೆ ಮಾಡಬೇಕು. ಮನುಷ್ಯನು ಕೂಡಾ ಬಳಸುವ ನೀರನ್ನು ಭೂಮಿಯ ಒಳಗೆ ಇಂಗುವಂತೆ ಮಾಡಿ ನೀರನ್ನು ಮರುಬಳಕೆ ಮಾಡಿ ನೀರಿನ ಸತ್ವವನ್ನು ಉಳಿಸಬೇಕು.

ಅಥಣಿ ತಾಲೂಕಿನಲ್ಲಿ ಅನಿಶ್ಚಿತವಾಗಿರುವ ಮಳೆ ಕಾಲ ಕಾಲಕ್ಕೆ ಸರಿಯಾದ ರೀತಿಯಲ್ಲಿ ಆಗದೇ ಹಾಗೂ ಅಸಮರ್ಪಕವಾಗಿ ಇರುವದರಿಂದ ತಾಲೂಕಿನ ಅನೇಕ ರೈತರು ತಮ್ಮ ಪ್ರಾಣ ಹಾನಿ ಮಾಡಿಕೊಂಡರು, ಇನ್ನೂ ಕೆಲವರು ವಲಸೆ ಹೋಗಿರುವುದನ್ನು ಕಂಡಾಗ ಅಥಣಿ ತಾಲೂಕಿನ ರೈತರ ಪರಿಸ್ಥಿತಿ ರೋಚನಿಯವೆನಿಸುತ್ತದೆ. ಇದನ್ನು ತಪ್ಪಿಸಲು ಸಣ್ಣ ನೀರಾವರಿ ಇಲಾಖೆಯು ಅಲ್ಲಲ್ಲಿ ಕೆರೆಗಳ ನಿರ್ಮಾಣ, ಬಾವಿ ನಿರ್ಮಾಣ, ಬಂದರುಗಳ ನಿರ್ಮಾಣ, ಹಾಗೂ ಬ್ಯಾರೇಜ್‌ಗಳ ನಿರ್ಮಾಣ ಮಾಡಿ, ಅಂತರ ಜಲ ಹೆಚ್ಚಿಸುವುದಕ್ಕೆ ಇಂಗು ಕೆರೆಗಳ ನಿರ್ಮಾಣ ಮಾಡಿ ಅಂತರ ಜಲದ ಬಗ್ಗೆ ಜನರಿಗೆ ಮಾಹಿತಿ ನೀಡುವ ಮೂಲಕ ಅಂತರ ಜಲವನ್ನು ಹೆಚ್ಚಿಸುತ್ತಿದೆ. ಅದರ ಜೊತೆಗೆ ಜೋರಾಗಿ ಬೀಳುವ ಮಳೆಯು ರಭಸವಾಗಿ ಹರಿದು ಹೋಗುವ ಮಳೆ ನೀರು ಹಳ್ಳದಿಂದ ನದಿಗೆ, ನದಿಯಿಂದ ಸಮುದ್ರಕ್ಕೆ ಹೋಗುವ ನೀರನ್ನು ತಡೆಯಲು ಚಿಕ್ಕ ಡ್ಯಾಂಗಳು, ಬಂದರುಗಳು, ಬ್ಯಾರೇಜಗಳು, ಕಿಂಡಿ ಆಣೆಕಟ್ಟುಗಳನ್ನ ನಿರ್ಮಾಣ ಮಾಡಿ ನೀರನ್ನು ತಡೆ ಹಿಡಿಯುವ ಮೂಲಕ ಅಂತರ್ಜಲವನ್ನು ಹೆಚ್ಚಿಸಿತು. ಅದರ ಜೊತೆ ನೀರಿನ ಮಹತ್ವ ನೀಡಿ ಸವಕಳಿಯಾಗುತ್ತಿರುವ ಭೂಮಿಯ ಜೊತೆಗೆ ಬಂಜರಾಗುತ್ತಿರುವ

೧. 'ಇದು ನಮ್ಮ ಕರ್ನಾಟಕ' – ಸಂ.ರಾ.ನಂ.ಚಂದ್ರಶೇಖರ ಪ್ರಕಾಶನ–ನವಕರ್ನಾಟಕ ಪ್ರಕಾಶನ ೨೦೦೫ ಪುಟ ಸಂಖ್ಯೆ– ೧೩೦

ಭೂಮಿಯನ್ನು ಫಲವತ್ತಾದ ಭೂಮಿಯನ್ನಾಗಿ ಮಾಡಲು ಕೈ ಗೊಂಡ ಸರಕಾರದ ಯೋಜನೆಗಳನ್ನು ಸಾಮಾನ್ಯ ಜನರು ಯಶಸ್ವಿಯಾಗಿ ಕಾರ್ಯರೂಪಕ್ಕೆ ತರುತ್ತಿರುವುದು.

ನಮ್ಮ ಭಾರತ ಸರ್ಕಾರ ರಾಷ್ಟ್ರಿಯ ನದಿ ಜೋಡಣೆ ಯೋಜನೆಯನ್ನು ಜಾರಿಗೆ ತರುವ ಮೂಲಕ, ದೇಶದಲ್ಲಿ ಯಾವ ಯಾವ ಪ್ರದೇಶ ಬಂಜರು ಭೂಮಿ ಹಾಗೂ ಬೀಳು (ಹಾಳು) ಬಿದ್ದ ಭೂಮಿಯಾಗಿದೆಯೋ, ಆ ಪ್ರದೇಶಕ್ಕೆ ನೀರು ಮುಟ್ಟಿಸುವ ಹಾಗೂ ಪ್ರತಿ ರಾಜ್ಯಗಳಿಗೆ ನೀರಿನ ಅನೂಕೂಲವಾಗುವ ದೆಸೆಯಲ್ಲಿ ನೀರಾವರಿ ಇಲಾಖೆ ಯೋಜನೆಗಳನ್ನು ರೂಪಿಸುವಲ್ಲಿ ಸಹಕಾರಿಯಾಗಿದೆ. ನೀರು ಒಂದು ಪ್ರಮುಖ ಸಂಪನ್ಮೂಲವಾಗಿದೆ. ನಮ್ಮ ದೇಶದಲ್ಲಿ ಸಮೃದ್ಧಿಯಾಗಿ ದೊರೆಯುತ್ತದೆ, ಆದರೆ ಜನಸಂಖ್ಯೆಯ ಹೆಚ್ಚಳದಿಂದಾಗಿ ನೀರಿನ ಕೊರತೆ ಎದುರಾಗುತ್ತಿದೆ. ನೀರಿನ ದುರ್ಬಳಕೆಯಿಂದಾಗಿ ಅಂತರ್ಜಲ ಮಟ್ಟ ಕುಸಿಯ ತೊಡಗಿದೆ. ಒಂದು ಕಾಲದಲ್ಲಿ ಸಮೃದ್ಧಿಯಾಗಿ ದೊರೆಯುತ್ತಿದ್ದ ನೀರು ಈಗ ೧೦೦೦ ಅಡಿ ಬೋರ್‌ವೆಲ್ ಕೊರೆಯಿಸಿದರೂ ನೀರು ದೊರೆಯುತ್ತಿಲ್ಲ, ಈಗ ಕೃಷಿಗೆ ಹಾಗೂ ನಗರ ಪ್ರದೇಶಗಳ ಜನರಿಗೆ ಕುಡಿಯಲೂ ಸಹ ನೀರು ದೊರೆಯುತ್ತಿಲ್ಲ. ನೀರಿನ ವ್ಯವಸ್ಥೆಯಲ್ಲಿ ಪ್ರಪಂಚದಲ್ಲಿ ನಮ್ಮದು ಏಳನೇಯ ದೋಡ್ಡ ರಾಷ್ಟ್ರವಾಗಿದ್ದು ಶೇಕಡಾ ೪% ರಷ್ಟು ಮರುಬಳಕೆ ನೀರಿನ ಸಂಪನ್ಮೂಲಗಳಿವೆ.[೨] ಇದರಲ್ಲಿ ೨೦೫೦ರ ವೇಳೆಗೆ ಶೇಕಡಾ ೫೮% ರಷ್ಟು ಬಳಕೆ ಮಾಡಿಕೊಳ್ಳ ಬಹುದಾಗಿದೆ. ಆದರೆ ಈಗ ಶೇಕಡಾ ೨೨% ರಷ್ಟುನ್ನು ಬಳಕೆ ಮಾಡಿಕೊಳ್ಳುತ್ತಿದ್ದೇವೆ. ಇದಕ್ಕೆಲ್ಲಾ ಕಾರಣ ನಾವು ನೀರಿನ ಸಂಪನ್ಮೂಲಗಳನ್ನು ಸಮರ್ಪಕವಾಗಿ ಸದ್ಬಳಕೆ ಮಾಡಿಕೊಳ್ಳುತ್ತಿದ್ದೇವೆ. ಇದಕ್ಕೆಲ್ಲಾ ಕಾರಣ ನಾವು ತಲಾ ನೀರಿನ ಲಭ್ಯತೆ ೨೦೦ ಕ್ಯೂಬಿಕ್ ಮೀಟರ್ ಇದ್ದದ್ದು ಅಮೇರಿಕಾದಲ್ಲಿ ೫೯೬೦ ಕ್ಯೂಬಿಕ್ ಮೀಟರ್ ಹಾಗೂ ಚೀನಾದಲ್ಲಿ ೨೪೮೬ ಕ್ಯೂಬಿಕ್ ಮೀಟರ್ ಇದೆ. ಕೇಂದ್ರ ಸರ್ಕಾರ ಜಾರಿಗೆ ತರಲು ಉದ್ದೇಶಿಸಿರುವ ನದಿ ನೀರು ಜೋಡಣೆ ಯೋಜನೆಯನ್ನು ಜಾರಿ ಮಾಡಿದರೆ ನೀರಿನ ಲಭ್ಯತೆ ಜಾಸ್ತಿಯಾಗಿ, ಅಂತರ್ಜಲ ಮಟ್ಟ ಹೆಚ್ಚಾಗುತ್ತದೆ. ನದಿಗಳ ಜೋಡಣೆಯ ಜೊತೆಗೆ ಮಳೆ ನೀರು ಮತ್ತು ಭೂಮಿಯಲ್ಲಿ ಪ್ರಕೃತಿ ದತ್ತವಾಗಿ ಬೀಳುವ ಮಳೆ ನೀರನ್ನು ಇಂಗಿಸುವದರಿಂದ ನೀರಿನ ಸಂಪನ್ಮೂಲಗಳನ್ನು ಹೆಚ್ಚಿಸಿ ಕೊಳ್ಳಬಹುದಾಗಿದೆ. ಇಂತಹ ಸಮಗ್ರ ಕ್ರಮಗಳನ್ನು ಅಳವಡಿಸಿಕೊಂಡರೆ ಸ್ಥಳಿಯವಾಗಿ ನೀರಿನ ಕೊರತೆ ನೀಗಿಸಿಕೊಳ್ಳಬಹುದಾಗಿದೆ. ಪ್ರತಿಯೊಬ್ಬರೂ ಮಳೆ ನೀರು ಹಾಗೂ ಭೂಮಿಯಲ್ಲಿ ನೀರನ್ನು ಇಂಗಿಸಿದರೆ ಖಂಡಿತವಾಗಿಯೂ ನೀರಿನ ಕೊರತೆ ನೀಗಿಸಿಕೊಳ್ಳಬಹುದು. ಈ ನಿಟ್ಟಿನಲ್ಲಿ ಸರ್ಕಾರ ಕಾರ್ಯೋನ್ಮುಖರಾಗಬೇಕು.[೩]

---

೨. 'ಶರದ ಕೃಷಿ' (ಮಾಸ ಪತ್ರಿಕೆ)– ಸಂ.ಜಯದೀಪ್ ಪ್ರಭು –ಜುಲೈ ೨೦೧೪ ಪುಟ ಸಂಖ್ಯೆ– ೧೦

೩. 'ಶರದ ಕೃಷಿ' (ಮಾಸ ಪತ್ರಿಕೆ)– ಸಂ.ಜಯದೀಪ್ ಪ್ರಭು –ಜುಲೈ ೨೦೧೪ ಪುಟ ಸಂಖ್ಯೆ– ೧೧

ಕರ್ನಾಟಕ ರಾಜ್ಯದಲ್ಲಿ ಮುಖ್ಯವಾಗಿ ರೈತರಿಗೆ ನೀರಿನ ವ್ಯವಸ್ಥೆಮಾಡಬೇಕಾದರೆ. ಸರಕಾರದ ಯೋಜನೆಗಳ ಪಟ್ಟಿ ರೂಪಿಸಿ ರೈತರಿಗೆ ನೀರಿನ ವ್ಯವಸ್ಥೆ ಮಾಡುತ್ತಾರೆ. ಈ ಯೋಜನೆಗಳನ್ನು ರೂಪಿಸಲು ಸರಕಾರವು ಮೊದಲು ರಾಜ್ಯದಲ್ಲಿ ಇರುವ ನೀರಾವರಿಯ ಮತ್ತು ಅರೆನೀರಾವರಿಯ ಬಗ್ಗೆ ಸಮೀಕ್ಷೆ ನಡೆಸುತ್ತದೆ. ಕರ್ನಾಟಕದ ಯಾವ ಭಾಗದಲ್ಲಿ ನೀರಿನ ಕೊರತೆ ಇದೆ ಎಂದು ತಿಳಿದು. ಅಲ್ಲಿ ನೀರಿನ ವ್ಯವಸ್ಥೆಯಾವ ರೀತಿಯಾಗಿ ಮಾಡಬೇಕು ಎಂದು ತಿಳಿದು ಯೋಜನೆ ಕೈಗೊಳ್ಳುತ್ತಾರೆ.

ಕರ್ನಾಟಕ ಏಕೀಕರಣವಾಗಿ ಆರು ದಶಕಗಳು ಸಮೀಪಿಸುತ್ತಿದ್ದರೂ ಇಂದಿಗೂ ನೀರಾವರಿ ಕ್ಷೇತ್ರದಲ್ಲಿನ ನಮ್ಮ ಸಾಧನೆ ತೀರಾ ನಗಣ್ಯವಾದದ್ದು. ಭಾರತದಲ್ಲಿ ರಾಜಸ್ಥಾನವನ್ನು ಬಿಟ್ಟರೆ ಕರ್ನಾಟಕದಲ್ಲಿಯೇ ಅತೀ ಹೆಚ್ಚು ಬಂಜರು ಪ್ರದೇಶ ಇದೆ ಎನ್ನುವುದು ವಾಸ್ತವದ ಸಂಗತಿ. ರಾಷ್ಟ್ರದ ಸರಾಸರಿ ನೀರಾವರಿ ಶೇಕಡಾ ೪೮% ರಷ್ಟಿದ್ದರೆ, ಕರ್ನಾಟಕದಲ್ಲಿ ಶೇಕಡಾ ೨೩% ರಷ್ಟಿದೆ ಎನ್ನುವುದನ್ನು ನಾವು ಗಮನಿಸಿದಾಗ ನಮ್ಮ ಸಾಧನೆ ಸಾಲದು ಎನಿಸುತ್ತದೆ. ನಮ್ಮ ಈ ಹಿನ್ನಡೆಗೆ ಅಂತರರಾಜ್ಯ ಜಲವಿವಾದಗಳು ಸ್ವಲ್ಪ ಮಟ್ಟಿಗೆ ಕಾರಣವಾದರೂ ಆಳುವವರು ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ ತೋರಿಸಿದ ವಿಳಂಬ ನೀತಿ ಮುಖ್ಯ ಕಾರಣವೆಂದರೆ ತಪ್ಪಾಗಲಾರದು ರಾಜ್ಯದಲ್ಲಿ ಕೃಷಿಗೆ ಯೋಗ್ಯವಾದ ೧೦೭ ಲಕ್ಷ ಹೆಕ್ಟರ್ ಜಮೀನಿದೆ. ಅದರಲ್ಲಿ ೫೫ ಲಕ್ಷ ಹೆಕ್ಟೇರ್‌ಗಳಿಗೆ ಮಾತ್ರ ನೀರಾವರಿ ಒದಗಿಸುವ ಜಲಸಂಪತ್ತಿದೆ. ದುರಂತವೆಂದರೆ ನಾವು ಕೇವಲ ೨೪.೯೧ ಲಕ್ಷ ಹೆಕ್ಟೇರುಗಳಿಗೆ ಮಾತ್ರ ನೀರಾವರಿ ಸೌಲಭ್ಯ ಕಲ್ಪಿಸಿದ್ದೇವೆ.[೪] ದೇಶದ ಒಟ್ಟು ಬರ ಪೀಡಿತ ಪ್ರದೇಶದಲ್ಲಿ ಕರ್ನಾಟಕದ ಪಾಲು ಶೇಕಡಾ ೨೩% ನಾವು ಕಟ್ಟಿದ ಜಲಾಶಯಗಳಲ್ಲಿ ನಿಂತಿರುವ ನೀರನ್ನು ಸರಿಯಾಗಿ ಬಳಸದೆ ಇರುವುದರಿಂದ ಈ ನೀರು ಅನ್ಯರ ಪಾಲಾಗುತ್ತಿದೆ. ಕರ್ನಾಟಕದಲ್ಲಿ ಹರಿಯುವ ಪಶ್ಚಿಮವಾಹಿನಿಯ ನದಿಗಳ ನೀರನ್ನು ಬರಪೀಡಿತ ಪ್ರದೇಶಗಳಿಗೆ ವ್ಯವಸಾಯಕ್ಕೆ, ಕುಡಿಯುವುದಕ್ಕೆ, ಬಳಸಲು ನದಿಗಳ ಜೋಡನೆ ಕೆಲಸವನ್ನು ತ್ವರಿತವಾಗಿ ಮಾಡಬೇಕಾಗಿದೆ. ನೆಲದ ಮೇಲಿರುವ ಜೀವಸಂಕುಲಕ್ಕೆ ಧಕ್ಕೆ ಬಾರದ ರೀತಿಯಲ್ಲಿ ಯೋಜನೆಗಳನ್ನು ರೂಪಿಸಿ ಪರಿಸರವನ್ನೂ ಕಾಯ್ದುಕೊಳ್ಳುವ ಕೆಲಸ ಆಗಬೇಕಾಗಿದೆ. ಅಕಾಲಿಕ ಮಳೆ, ಹವಾಮಾನ ವೈಪರೀತ್ಯಗಳಂತಹ ಪ್ರಕೃತಿ ವಿಕೋಪಗಳು ಸಂಪ್ರದಾಯಿಕ ಕೃಷಿಯ ಮೇಲೆ ಬೀರಿರುವ ಪರಿಣಾಮ ಅಪಾರ. ಎಲ್ಲ ಏಳು ಬೀಳುಗಳೊಂದಿಗೆ ಮುಖಾಮುಖಿಯಾಗುತ್ತಾ ಸಾಗುತ್ತಿರುವ ರೈತರ ನೆರವಿಗೆ ರಾಜ್ಯ ಸರಕಾರ ಕಂಕಣಬದ್ಧವಾಗಿ ನಿಂತಿದೆ. ರೈತರ ಹಿತರಕ್ಷಣೆಗೆ ಹಲವಾರು ಹೊಸ ಹೊಸ ಯೋಜನೆಗಳನ್ನು ಹಮ್ಮಿಕೊಂಡುಬರುತ್ತಿದೆ.

---

೪. 'ಕನ್ನಡ ನುಡಿ' – ಸಂ ಡಾ ಕಾಂತರಾಜಪುರ ಸುರೇಶ್, ಆರ್ ವಸಂತಕುಮಾರ. ಕನ್ನಡ ಸಾಹಿತ್ಯ ಪರಿಷತ್ತ ಬೆಂಗಳೂರು – ಜನೆವರಿ–ಮಾರ್ಚ ೨೦೧೫ ಪುಟ ಸಂಖ್ಯೆ– ೧೦,೧೧

"ಕೋಟಿ ವಿದ್ಯೆಗಿಂತ

ಮೇಟಿ ವಿದ್ಯೆಯೇ ಮೇಲು

ಮೇಟಿಯಿಂ ರಾಜ ನಡೆದುದಲ್ಲದೆ ದೇಶ

ದಾಟವೆ ಕೆಡುಕು ಸರ್ವಜ್ಞ"

ಈ ಮೇಲಿನ ಸರ್ವಜ್ಞನ ವಚನದಂತೆ ನಮ್ಮ ದೇಶದಲ್ಲಿ ಇರುವ ಜನರು ಬದುಕಲು ಆಹಾರ ಉತ್ಪಾದಿಸಲು ರೈತನೇ ಬೇಕು ದೇಶದ ಬೆನ್ನೆಲಬು ಆಗಿರುವ ರೈತನು ಉಳಿಯಲು ನೀರು ಬೇಕು. ಬೆಳೆಗಳನ್ನು ಬೆಳೆಯಲು ಅವನಿಗೆ ಯಾವುದೇ ರೀತಿಯಾಗಿ ವಿದ್ಯಾಭ್ಯಾಸ, ನಾವು ಪಡೆಯುವ ಪದವಿ ಶಿಕ್ಷಣ ಅವನಿಗೆ ಬೇಕಾಗಿಲ್ಲ ಒಳ್ಳೆಯ ಶಕ್ತಿ, ದುಡಿಯುವ ಛಲ, ದೃಢ ಮನಸ್ಸಿನ ಮನೋಬಲ ಇದ್ದರೆ ಸಾಕು, ಆತ ರೈತನಾಗಲು ಅರ್ಹ ವ್ಯಕ್ತಿಯಾಗಿ ದೇಶಕ್ಕೆ ಅನ್ನವನ್ನು ನೀಡುವ ದೇವರಾಗಿ ದೇಶಕ್ಕೆ ರಾಜನೆಂಬ ಹೆಸರಿಗೆ ಮಾದರಿಯಾಗುತ್ತಾನೆ. ದೇಶಕ್ಕೆ ಅನ್ನ ನೀಡುವ ರೈತ ದೇವರ ಸಮನಾಗಿ ಇರುತ್ತಾನೆಂದು ಹೇಳಬಹುದು.

ಸಣ್ಣ ನೀರಾವರಿ ಯೋಜನೆಯಡಿ ಕೆರೆಗಳ ಹಾಗೂ ಪಾರಂಪರಿಕ ಬಲಕಾಯಗಳ ಪುನರುಜ್ಜೀವನ ಕಾರ್ಯವನ್ನು ಭರದಿಂದ ಕೈಗೆತ್ತಿಕೊಂಡಿದೆ. ೧೦೦೦ ಕೋಟಿ ರೂಪಾಯಿಗಳ ಅಂದಾಜು ಮೊತ್ತದಲ್ಲಿ ೭೫೬ ಸಣ್ಣ ನೀರಾವರಿ ಕಾಮಗಾರಿಗಳಿಗೆ ಭಾರತ ಸರಕಾರದ ಅನುಮೊದನೆ ಪಡೆದು ಅನುಷ್ಠಾನಗೊಳಿಸಲಾಗುತ್ತಿದೆ. ರಾಜ್ಯದಲ್ಲಿರುವ ಕೆರೆಗಳನ್ನು ಸಂರಕ್ಷಿಸಿ, ಉಳಿಸುವ ಸದುದ್ದೇಶದಿಂದ ಕೆರೆ ಅಭಿವೃದ್ಧಿ ಪ್ರಾಧಿಕಾರವನ್ನು ರಚಿಸಿದೆ. ಅಂತರ್ಜಲ ಸಂರಕ್ಷಣೆ ದೃಷ್ಠಿಯಿಂದ ಹೊಸದಾಗಿ ಅಂತರ್ಜಲ ನಿರ್ದೇಶನಾಲಯವನ್ನು ಸ್ಥಾಪಿಸಿದೆ.[೮]

## ೧.೨ ಅಧ್ಯಯನದ ಮಹತ್ವ

ಪ್ರಸ್ತುತ ಈ ಅಧ್ಯಯನದಲ್ಲಿ ಮುಖ್ಯವಾಗಿ ನಾವು ಸಣ್ಣ ನೀರಾವರಿಯ ಬಳಕೆಗಳ ಅನಕೂಲತೆಗಳು ಹಾಗೂ ಸಣ್ಣ ನೀರಾವರಿ ಇಲಾಖೆಯ ಯೋಜನೆಗಳಾವವು ? ಈ ಯೋಜನೆಗಳು ಸಾಮಾನ್ಯ ಜನರಿಗೆ ತಲುಪುತ್ತಿವೆಯೋ ಹೇಗೆ ? ಸಣ್ಣ ನೀರಾವರಿಯ ಮೂಲಕ ನಾವು ನಮ್ಮ ಆರ್ಥಿಕ ಜೀವನವನ್ನು ಹಾಗೂ ಸಾಮಾಜಿಕವಾಗಿ ಅಭಿವೃದ್ಧಿ ಹೊಂದುವುದು ಹೇಗೆ? ಸಣ್ಣ ನೀರಾವರಿಯಿಂದ ನಮ್ಮ ಒಂದು ಸಾಮಾನ್ಯ ವ್ಯಕ್ತಿಯಾಗಿ ಯಾವ ರೀತಿ ಅಭಿವೃದ್ಧಿಯಾಗಬೇಕು. ನೀರಾವರಿಯ ಮೂಲಗಳ ಬಗೆಯಾಗಲಿ, ಅವುಗಳ ಸಂರಕ್ಷಣೆಯ ಬಗೆಯಾಗಲಿ, ವಿಶ್ಲೇಷಿಸುವುದು ಅವಶ್ಯವಿದೆ. ಮಳೆಯ ಅನಿಶ್ಚಿತತೆ, ಮಳೆಯ ಅಸಮ ಹಂಚಿಕೆ, ಮಳೆ ಬಹಳ ದಿವಸಗಳವರೆಗೆ ಆಗದಿರುವುದು, ಭೂಮಿಯಲ್ಲಿ ನೀರಿನ ಶಕ್ತಿ ಕಡಿಮೆಯಾಗುವದು, ಅತಿಯಾದ ಮಳೆಯಿಂದ ಭೂ ಸವಕಳಿಯಾಗಿ ಭೂಮಿ ಬಂಜರಾಗುವದು ಆಧುನಿಕ ನೀರಾವರಿಗೂ ಮತ್ತು ಈಗಿನ ನೀರಾವರಿಗೂ ಇರುವ ವ್ಯತ್ಯಾಸದ ಬಗ್ಗೆ ತಿಳಿಯುವದು ಈ ಅಧ್ಯಯನಧ ಮಹತ್ವವಾಗಿದೆ.

## ೧.೩ ಅಧ್ಯಯನದ ಉದ್ದೇಶಗಳು

ಪ್ರಸ್ತುತ ಈ ಅಧ್ಯಯನದಲ್ಲಿ ಮುಖ್ಯವಾಗಿ ಈ ಕೆಳಕಂಡ ಉದ್ದೇಶಗಳನಿಟ್ಟುಕೊಂಡು ಅಧ್ಯಯನ ಮಾಡಲಾಗುವುದು.

೧ ಅಥಣಿ ತಾಲೂಕಿನ ಭೌಗೋಳಿಕ ಹಿನ್ನಲೆ ಅಧ್ಯಯನ ಮಾಡುವದು

೨ ವಿವಿಧ ನೀರಾವರಿ ಅಭಿವೃದ್ಧಿ ಯೋಜನೆಗಳನ್ನು ಅರಿಯುವದು.

೩ ಸಣ್ಣ ನೀರಾವರಿ ಬಳಕೆದಾರರ ಆರ್ಥಿಕ ಅಭಿವೃದ್ಧಿಯನ್ನು ಅಭ್ಯಸಿಸುವುದು.

೪ ಅಧ್ಯಯನದ ಆಧಾರದ ಮೇಲೆ ಸಣ್ಣ ನೀರಾವರಿಯ ಕೊರತೆ ಹಾಗೂ ಸಲಹೆಗಳನ್ನು ನೀಡುವದು.

ಈ ಮೇಲಿನ ಎಲ್ಲಾ ಉದ್ದೇಶಗಳನ್ನಿಟ್ಟುಕೊಂಡು ಅಧ್ಯಯನವನ್ನು ಯಶಸ್ವಿಯಾಗಿ ಸಾಧಿಸುವುದು ಮುಖ್ಯ ಉದ್ದೇಶವಾಗಿದೆ.

## ೧.೪ ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನಕ್ಕೆ ಮಾಹಿತಿ ಸಂಗ್ರಹಿಸಲು ಈ ಕೆಳಕಂಡ ವಿಧಾನಗಳನ್ನು ಉಪಯೋಗಿಸಲಾಗಿದೆ

**೧. ಪ್ರಾಥಮಿಕ ಮಾಹಿತಿ ಸಂಗ್ರಹ ವಿಧಾನ**

ಪ್ರಶ್ನಾವಳಿಯ ಅನುಸೂಚಿ

**೨. ಅನುಷಂಗಿಕ ಮಾಹಿತಿ ಸಂಗ್ರಹ ವಿಧಾನ**

ಮುದ್ರಿತ ಪುಸ್ತಕಗಳು, ದಿನಪತ್ರಿಕೆಗಳು, ಇಲಾಖೆಯ ವರದಿಗಳು, ಇತ್ಯಾದಿಗಳು.

**೧. ಪ್ರಾಥಮಿಕ ಮಾಹಿತಿ ಸಂಗ್ರಹ ವಿಧಾನ**

ಪ್ರಶ್ನಾವಳಿ ಅನುಸೂಚಿ ವಿಧಾನವನ್ನು ಬಳಸಿಕೊಂಡು ಕ್ಷೇತ್ರ ಕಾರ್ಯ ಕೈಗೊಂಡು ಸಮೀಕ್ಷೆಯ ಮೂಲಕ ಮಾಹಿತಿ ಸಂಗ್ರಹಿಸಲಾಯಿತು. ಸಣ್ಣ ನೀರಾವರಿ ಬಳಕೆದಾರರಲ್ಲಿ ಅನಕ್ಷರತೆಯು ಹೆಚ್ಚಿನ ಪ್ರಮಾಣದಲ್ಲಿರುತ್ತದೆ ಎಂಬ ಪೂರ್ವ ಮಾಹಿತಿಯ ಆಧಾರದ ಮೇಲೆ ನಾವೇ ರಚಿಸಿಕೊಂಡ "ಪ್ರಶ್ನಾವಳಿ ಅನುಸೂಚಿ" ಯನ್ನು ಉಪಯೋಗಿಸಿ ಆ ಪ್ರಶ್ನೆಗಳನ್ನು ನಾವೇ ಕೇಳಿ ಅದಕ್ಕೆ ಅವರಿಂದ ದೊರೆತ ಉತ್ತರ ಮತ್ತು ಪ್ರತಿಕ್ರಿಯೆಯನ್ನು ದಾಖಲಿಸಿಕೊಳ್ಳುವುದು.

## ೨. ಅನುಷಂಗಿಕ ಮಾಹಿತಿ ಸಂಗ್ರಹ ವಿಧಾನದಲ್ಲಿ

ಅಧ್ಯಯನಕ್ಕೆ ಸಂಬಂಧಿಸಿದ ಇತರೇ ಮಾಹಿತಿಯನ್ನು ಮಾನವನ ಅಭಿವೃದ್ಧಿ ವರದಿಗಳು, ಕರ್ನಾಟಕ ಸರ್ಕಾರದ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಈಗಾಗಲೆ ನಡೆದು ಹೋದಂತಹ ಕೆಲ ಅಧ್ಯಯನಗಳ ಮೂಲಕ ಹಲವಾರು ಲೇಖಕರ, ಅರ್ಥಶಾಸ್ತ್ರಜ್ಞರ, ಸಮಾಜಶಾಸ್ತ್ರಜ್ಞರ ಪ್ರಕಟಿತ ಬರಹಗಳು, ಪುಸ್ತಕಗಳು, ಲೇಖನ, ಯೋಜನೆ(ನೀತಿ) ಆಯೋಗದ ವರದಿಗಳು, ಕೃಷಿಗೆ ಸಂಬಂಧಿಸಿದ ಸಂಚಿಕೆಗಳು, ದಿನಪತ್ರಿಕೆಗಳ ಮೂಲಕ ಮಾಹಿತಿ ಸಂಗ್ರಹಣ ಮಾಡಲಾಯಿತು.

## ೧.೫ ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಈ ಅಧ್ಯಯನಕ್ಕೆ ಸಂಬಂಧಪಡುವ ಜಲ ಸಂಪನ್ಮೂಲ ಇಲಾಖೆ ಅಡಿಯಲ್ಲಿ ಬರುವ ಸಣ್ಣ ನೀರಾವರಿ ಇಲಾಖೆಯು ಸುಮಾರು ೪೦ ಹೆಕ್ಟೇರ್‌ನಿಂದ ೨೦೦೦ ಹೆಕ್ಟೇರ್‌ಗಳವರೆಗೆ ಅಚ್ಚುಕಟ್ಟು ಇರುವ ಎಲ್ಲಾ ನೀರಾವರಿ ಯೋಜನೆಗಳನ್ನು ಸಣ್ಣ ನೀರಾವರಿ ಯೋಜನೆಗಳೆಂದು ಪರಿಗಣಿಸಲಾಗಿದೆ. ಕೃಷಿಕ ಜನರಿಗೆ ಕೃಷಿಗೆ ಬೇಕಾದ ನೀರನ್ನು ಜನರಿಗೆ ತ್ವರಿತವಾಗಿ ನೀರಿನ ವ್ಯವಸ್ಥೆ ಮಾಡಿಕೊಡುವ ಉದ್ಧೇಶ ಈ ಇಲಾಖೆಯ ಯೋಜನೆಯದಾಗಿದೆ. ಈ ಸಣ್ಣ ನೀರಾವರಿ ಇಲಾಖೆಯು ತನ್ನ ಯೋಜನಾ ಕಾರ್ಯವನ್ನು ವಿಂಗಡಿಸಲು ಕೆಲವು ಕಛೇರಿಯನ್ನು ಆರಂಭಿಸಿದ್ದು ಅದರಲ್ಲಿ ಕರ್ನಾಟಕದಲ್ಲಿ ಎರಡು ವಲಯಗಳು; ಒಂದು ಬೆಂಗಳೂರು (ದಕ್ಷಿಣ ವಲಯ) ಹಾಗೂ ವಿಜಯಪುರ (ಉತ್ತರ ವಲಯ) ಉತ್ತರವಲಯದಲ್ಲಿ ಎರಡು ವೃತ್ತ ಕಛೇರಿಗಳನ್ನು ಹೊಂದಿದ್ದು, ಒಂದು ಬೆಳಗಾವಿ ಜಿಲ್ಲೆ ಹಾಗೂ ಗುಲಬರ್ಗಾ (ಕಲಬುರಗಿ) ಜಿಲ್ಲೆ ಈ ಎರಡೂ ವೃತ್ತ ವಲಯದ ಮೇಲೆ ಗುಣ ನಿಯಂತ್ರಣಾ ಕಛೇರಿ ಧಾರವಾಡ ಜಿಲ್ಲೆಯಲ್ಲಿದೆ. ಬೆಳಗಾವಿಯ ವೃತ್ತ ಕಛೇರಿಯಲ್ಲಿ ಬರುವ ನಾಲ್ಕು ವಿಭಾಗಗಳು ೧, ಬೆಳಗಾವಿ, ೨. ಧಾರವಾಡ, ೩. ಹಳಿಯಾಳ, ೪. ವಿಜಯಪುರ ಬೆಳಗಾವಿಯ ವಿಭಾಗದಲ್ಲಿ ಬರುವ ನಾಲ್ಕು ಉಪ ವಿಭಾಗಗಳು ೧ ಬೆಳಗಾವಿ, ೨ ಗೋಕಾಕ, ೩ ಅಥಣಿ. ಈ ಅಥಣಿ ಉಪ ವಿಭಾಗದಲ್ಲಿ ಮೂರು ತಾಲೂಕುಗಳು ೧ ಅಥಣಿ, ೨ ಚಿಕ್ಕೋಡಿ, ೩ ರಾಯಬಾಗ, ಈ ತಾಲೂಕುಗಳು ಅಥಣಿ ಉಪ ವಿಭಾಗದ ಕಛೇರಿ ವ್ಯಾಪ್ತಿಯಲ್ಲಿ ಬರುತ್ತವೆ. ನಮ್ಮ ಈ ಪ್ರಸ್ತುತ ಅಧ್ಯಯನದಲ್ಲಿ ಅಥಣಿ ತಾಲೂಕಿನಲ್ಲಿ ಬರುವ ಎಲ್ಲಾ ಗ್ರಾಮಗಳನ್ನು ಈ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

## ೧.೬ ಅಧ್ಯಯನದ ವಿನ್ಯಾಸ.

ಪ್ರಸ್ತುತ ಅಧ್ಯಯನವನ್ನು ಐದು ಅಧ್ಯಾಯಗಳಾಗಿ ವಿಂಗಡಿಸಲಾಗಿದೆ.

**ಅಧ್ಯಾಯ – ಒಂದು**

ಅಧ್ಯಾಯ ಒಂದರಲ್ಲಿ ಅಧ್ಯಯನದ ಪ್ರವೇಶ, ಸಣ್ಣ ನೀರಾವರಿಯ ಮಹತ್ವ, ಉದ್ದೇಶಗಳು, ವಿಧಾನ, ವ್ಯಾಪ್ತಿ ಹಾಗೂ ವಿನ್ಯಾಸವನ್ನು ಒಳಗೊಂಡಿದೆ.

**ಅಧ್ಯಾಯ – ಎರಡು**

ಈ ಅಧ್ಯಾಯವನ್ನು ಎರಡು ವಿಭಾಗಗಳನ್ನಾಗಿ ವಿಂಗಡಿಸಲಾಗಿದೆ ಇದರಲ್ಲಿ

**ಅ** ವಿಭಾಗದಲ್ಲಿ. ಅಥಣಿ ತಾಲೂಕಿನ ಸಣ್ಣ ನೀರಾವರಿಯ ಪರಿಕಲ್ಪನೆಗಳು ಹಾಗೂ ಸಣ್ಣ ನೀರಾವರಿ ಅದರ ಉದ್ಧೇಶಗಳು ಮತ್ತು ಕಾಮಗಾರಿಯ ವಿಂಗಡಣೆ ವ್ಯವಸ್ಥೆ ಬಗ್ಗೆ ಮಾಹಿತಿ ಒಳಗೊಂಡಿದೆ.

**ಬ** ವಿಭಾಗಕ್ಕೆ ಸಣ್ಣ ನೀರಾವರಿ ಯೋಜನೆಯ ಬೆಳವಣಿಗೆ ಹಿನ್ನೆಲೆ ಭೌಗೋಳಿಕವಾಗಿ, ಸಣ್ಣ ನೀರಾವರಿಯ ಮೂಲಗಳ ಹಾಗೂ ಗ್ರಾಮೀಣ ಪ್ರದೇಶದಲ್ಲಿ ಸಣ್ಣ ನೀರಾವರಿಯ ಪಾತ್ರದ ಹಿನ್ನೆಲೆ ಮತ್ತು ಸರಕಾರ ಮತ್ತು ಸರಕಾರೇತರ ಸಂಸ್ಥೆಗಳ ಸಹಾಯದ ಬಗ್ಗೆ ವಿವರಣೆ ಒಳಗೊಂಡಿದೆ.

**ಅಧ್ಯಾಯ – ಮೂರು**

ಈ ಅಧ್ಯಾಯದಲ್ಲಿ ಅಥಣಿ ತಾಲೂಕಿನ ಸಣ್ಣ ನೀರಾವರಿಯ ಅಭಿವೃದ್ಧಿ ವಿಶ್ಲೇಷಣೆ, ಮೂಲಗಳ ಅಭಿವೃದ್ಧಿ, ಅನೂಕೂಲತೆಗಳು, ಅನಾನೂಕೂಲತೆಗಳು ಹಾಗೂ ಸರಕಾರದ ಅಭಿವೃದ್ಧಿ ಯೋಜನೆಗಳು ಬಗ್ಗೆ ಮಾಹಿತಿ ಒಳಗೊಂಡಿದೆ.

**ಅಧ್ಯಾಯ – ನಾಲ್ಕು**

ಈ ಅಧ್ಯಾಯದಲ್ಲಿ ಅಥಣಿ ತಾಲೂಕಿನ ಸಣ್ಣ ನೀರಾವರಿಯ ಬಳಕೆದಾರಗೆ ಪ್ರಶ್ನಾವಳಿ ಮೂಲಕ ಮಾಹಿತಿ ಸಂಗ್ರಹಿಸಿ ಅವರಿಂದ ಬಂದ ಪ್ರತಿಕ್ರಿಯೆ ವಿಶ್ಲೇಷಣೆ ನೀರಾವರಿ ಪೂರ್ವದ ಸ್ಥಿತಿಗತಿಗಳು, ಬಳಕೆಯಾಗುತ್ತಿರುವ ಯೋಜನೆಗಳು ಹಾಗೂ ಯೋಜನೆಯ ಲಾಭಗಳ ಬಗ್ಗೆ ಮಾಹಿತಿ ಒಳಗೊಂಡಿದೆ.

**ಅಧ್ಯಾಯ – ಐದು**

ಈ ಅಧ್ಯಾಯದಲ್ಲಿ ಅಧ್ಯಯನದ ಸಮಾರೋಪ, ಫಲಿತಗಳು, ಹಾಗೂ ಸಲಹೆ ಸೂಚನೆಗಳನ್ನೊಳಗೊಂಡಿದೆ.

# ಅಧ್ಯಾಯ – ಎರಡು

## ಅಥಣಿ ತಾಲೂಕಿನ ಸಣ್ಣ ನೀರಾವರಿಯ ಹಿನ್ನೆಲೆ

**ಅ ಸಣ್ಣ ನೀರಾವರಿ ಯೋಜನೆಯ ಪರಿಕಲ್ಪನೆಗಳು**

೧. ಸಣ್ಣ ನೀರಾವರಿ ಅರ್ಥ

೨. ಸಣ್ಣ ನೀರಾವರಿ ಉದ್ದೇಶಗಳು

೩. ಸಣ್ಣ ನೀರಾವರಿ ಕಾಮಗಾರಿಯ ವಿಂಗಡಣೆ ವ್ಯವಸ್ಥೆ

**ಬ ಸಣ್ಣ ನೀರಾವರಿ ಯೋಜನೆಯ ಬೆಳವಣಿಗೆ ಹಿನ್ನೆಲೆ**

೧ ಭೌಗೋಳಿಕ ಹಿನ್ನಲೆ

೨ ಸಣ್ಣ ನೀರಾವರಿಯ ಮೂಲಗಳು

೩ ಗ್ರಾಮೀಣ ಪ್ರದೇಶದಲ್ಲಿ ಸಣ್ಣ ನೀರಾವರಿಯ ಪಾತ್ರ

೪ ಸರಕಾರ ಹಾಗೂ ಸರಕಾರೇತರ ಸಂಸ್ಥೆಗಳಿಂದ ಸಹಾಯ.

# ಅಥಣಿ ತಾಲೂಕಿನ ಸಣ್ಣ ನೀರಾವರಿಯ ಹಿನ್ನೆಲೆ.

## ಅ. ಸಣ್ಣ ನೀರಾವರಿ ಯೋಜನೆಯ ಪರಿಕಲ್ಪನೆಗಳು

ಕೃಷಿ ಯಶಸ್ವಿಯಾಗಬೇಕಾದರೆ ಫಲವತ್ತಾದ ಮಣ್ಣು ಇರುವುದರ ಜೊತೆಗೆ ನೀರಿನ ಲಭ್ಯತೆಯು ಅತ್ಯಂತ ಅವಶ್ಯವಾಗಿದೆ. ಈ ಹಿನ್ನೆಲೆಯಲ್ಲಿ ಸಣ್ಣ ನೀರಾವರಿಯ ಪರಿಕಲ್ಪನೆಗಳನ್ನು ಈ ಕೆಳಗೆ ವಿವರಿಸಲಾಗಿದೆ.

### ನೀರಾವರಿ ಅರ್ಥ

ನಾಲೆಗಳಲ್ಲಿ ಮತ್ತು ಹಳ್ಳಗಳಲ್ಲಿ ಆಯ್ಕೆ ಮಾಡಿದ ಬಿಂದುವಿಗೆ ಮಳೆ ನೀರನ್ನು ಒದಗಿಸುವ ಪ್ರದೇಶಕ್ಕೆ ಜಲಾನಯನ ಪ್ರದೇಶ ಎಂದು ಕರೆಯುವರು.

ಕಡಿಮೆ ಮಳೆ ಬೀಳುವ ಹಾಗೂ ಅನಿಶ್ವಿತವಾಗಿರುವ ಪ್ರದೇಶಗಳಲ್ಲಿ ಕೆರೆ, ಬಾವಿ, ಕೊಳವೆಬಾವಿ, ಕಾಲುವೆ, ಅಣೆಕಟ್ಟಡಗಳ ಹೀಗೆ ಮುಂತಾದ ಮೂಲಗಳಿಂದ ಕೃತಕವಾಗಿ ನೀರು ಹಾಯಿಸುವ ವ್ಯವಸ್ಥೆಯನ್ನು ನೀರಾವರಿ ಎಂದು ಹೇಳಬಹುದು.

### ನೀರಾವರಿ ಎಂದರೇನು ?

ಮಳೆ ತೀರಾ ಕಡಿಮೆಯಿರುವ ಮತ್ತು ಅನಿಶ್ಚಿತವಾಗಿರುವ ಪ್ರದೇಶಗಳಲ್ಲಿ ಕೆರೆ, ಬಾವಿ, ಹೊಳೆ, ನದಿ, ಕಾಲುವೆ ಹೀಗೆ ಮುಂತಾದ ಜಲಮೂಲಗಳಿಂದ ಬೇಸಾಯಕ್ಕೆ ನೀರು ಒದಗಿಸುವುದನ್ನು ನೀರಾವರಿ (Irrigation) ಎಂದು ಕರೆಯಲಾಗುತ್ತದೆ, ಸಂಕುಚಿತ ಅರ್ಥದಲ್ಲಿ ನೀರಾವರಿಯನ್ನು ಕೃಷಿಗೆ ನೀರು ಪೂರೈಕೆ ಎಂದು ವ್ಯಾಖ್ಯಾನಿಸಲಾಗುತ್ತದೆ. ವಿಶಾಲಾರ್ಥದಲ್ಲಿ ನೀರಾವರಿಯು ನೀರು ಸಂಗ್ರಹ ನೀರು ಪೂರೈಕೆ, ಪ್ರವಾಹ ನಿಯಂತ್ರಣ, ನೀರು ಇಂಗಿಸುವಿಕೆಯ ತಂತ್ರಗಳ ಅಳವಡಿಕೆ, ಭೂ ಸವಕಳಿ ನಿಯಂತ್ರಣ ಮತ್ತು ಭೂ ಸಾರ ಸಂರಕ್ಷಣೆ ಇತ್ಯಾದಿಗಳು ಆಗಿದೆ. ಮುಖ್ಯವಾಗಿ ಸಣ್ಣ ನೀರಾವರಿ ಎಂದರೆ ೪೦ ಹೆಕ್ಟೇರ ರಿಂದ ೨೦೦೦ ಹೆಕ್ಟೇರ್ ಪ್ರದೇಶದವರೆಗೆ ಸಾಗುವಳಿ ಮಾಡಬಹುದಾದ ವಲಯ ಪ್ರದೇಶ(ಸಿಸಿಎ)ವನ್ನು ಹೊಂದಿರುವ ನೀರಾವರಿ ವ್ಯವಸ್ಥೆಯನ್ನು ಸಣ್ಣ ನೀರಾವರಿ ಎಂದು ಕರೆಯುತ್ತಾರೆ. ಭೂಮಿಗೆ ಬೀಳುವ ಮಳೆಯ ನೀರನ್ನು ಸರಾಗವಾಗಿ ಹರಿದು ಹೋಗುವಂತೆ ನಾಲೆ ಮತ್ತು ಹಳ್ಳಕ್ಕೆ ಸೇರುವಂತೆ ಮಾಡುವ ಮೂಲಕ ಆ ಪ್ರದೇಶದಲ್ಲಿ ನೀರಾವರಿಯನ್ನು ಅಭಿವೃದ್ಧಿಪಡಿಸಲು ಪ್ರಯತ್ನಿಸಲಾಗುತ್ತದೆ. ಅದಕ್ಕಾಗಿ ತಡೆ, ಅಣೆಕಟ್ಟುಗಳು, ಗುಂಡಕಲ್ಲು ತಡೆಗಳು, ತೋಡುಗುಂಡಿಗಳು ಕೃಷಿ ಹೊಂಡಗಳನ್ನು ಮೊದಲಾದವುಗಳನ್ನು ನಿರ್ಮಿಸಲಾಗುತ್ತದೆ.

## ಸಣ್ಣ ನೀರಾವರಿಯ ಉದ್ದೇಶಗಳು

ಸಣ್ಣ ನೀರಾವರಿಯ ಮುಖ್ಯ ಉದ್ದೇಶವೆಂದರೆ ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ಸರಕಾರ ಅಥವಾ ಸರಕಾರೇತರ ಸಂಸ್ಥೆಗಳಿಂದ ಸಹಾಯಧನ ನೀಡಿ ರೈತರಿಗೆ ನೀರಾವರಿ ವ್ಯವಸ್ಥೆ ಮಾಡುವದು. ಅಂತರ್ಜಲದ ಬಗ್ಗೆ ಅರಿವು ಮೂಡಿಸಿ ಭೂಮಿಯಲ್ಲಿ ಅಂತರ್ಜಲ ಹೆಚ್ಚಿಸುವಂತೆ ಮಾಡುವದು. ಇದರಿಂದ ರೈತರು ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ಹಲವಾರು ಸಮಸ್ಯೆಗಳನ್ನು ಎದುರಿಸಿ ಅಭಿವೃದ್ಧಿಹೊಂದುವ ಉದ್ದೇಶವಾಗಿದೆ. ಈ ಉದ್ಧೇಶಗಳು ಕೆಳಗಿನಂತ್ತಿವೆ.

೧ ಕಾಲಕಾಲಕ್ಕೆ ಮಳೆ ಬಾರದೆ ಇರುವ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಒದಗಿಸುವದು.

೨ ನೀರಾವರಿ ಮೂಲಗಳನ್ನು ಸುಧಾರಣೆ ಮಾಡುವದು

೩ ನೀರನ್ನು ಒದಗಿಸುವ ಮೂಲಕ ಒಕ್ಕಲುತನದ ಉತ್ಪಾದನೆಯನ್ನು ಹೆಚ್ಚಿಸುವದು.

೪ ನೆರೆ ಹಾವಳಿ ಕ್ಷಾಮ ಅಥವಾ ಅತಿವೃಷ್ಟಿ ಮತ್ತು ಅನಾವೃಷ್ಟಿಗಳನ್ನು ಹೋಗಲಾಡಿಸುವದು.

೫ ಕೆರೆಗಳು, ನಾಲೆಗಳು, ಹಳ್ಳಗಳು ಜಲಾಶಯಗಳಲ್ಲಿ ಹೂಳು ತುಂಬುವದನ್ನು ತಡೆಗಟ್ಟಿ ನೀರಿನ ಸಂಗ್ರಹವನ್ನು ಹೆಚ್ಚಿಸುವದು.

೬ ಮಣ್ಣು, ನೀರು, ಸಸ್ಯರಾಶಿಗಳ ಸಂರಕ್ಷಣೆ ಮತ್ತು ಸುಧಾರಣೆ ಮಾಡುವದು.

೭ ಭೂಮಿಯಲ್ಲಿ ನೀರು ಹೆಚ್ಚಾಗಿ ಇಂಗುವಂತೆ ಮಾಡುವದು.

೮ ಹರಿಯುವ ನೀರಿಗೆ ತಡೆಯೊಡ್ಡಿ ನಿಧಾನವಾಗಿ ಹರಿಯುವಂತೆ ಮಾಡುವದು ಮತ್ತು ನೀರನ್ನು ಸಂಗ್ರಹಿಸುವದು.

೯ ಸಂಗ್ರಹಿಸಿದ ನೀರನ್ನು ನೀರಾವರಿ, ಗೃಹ ಬಳಕೆ ,ಕೈಗಾರಿಕೆಗಳಿಗೆ, ವಿದ್ಯುತ್ ಉತ್ಪಾದನೆಗೆ ಬಳಕೆ ಮಾಡುವುದು.

೧೦ ಪರಿಸರ ಸಂರಕ್ಷಣೆ ಮಾಡುವದು.

೧೧ ಅಂತರ ಜಲವನ್ನು ಅಭಿವೃದ್ಧಿ ಪಡಿಸುವದು.

೧೨ ಸಣ್ಣ ಕೆರೆಗಳ ನಿರ್ಮಾಣ ಮಾಡುವದು.

೧೩ ಮೀನುಗಾರಿಕೆಗೆ ಪ್ರೋತ್ಸಾಹ ನೀಡುವದು.

೧೪ ಧಾರಾಕಾರವಾಗಿ ಬೀಳುವ ಮಳೆಯ ನೀರನ್ನು ಸುಲಭವಾಗಿ ಹರಿಯದಂತೆ ಮಾಡಿ ಚಿಕ್ಕಡ್ಯಾಮಗಳನ್ನು ನಿರ್ಮಾಣ ಮಾಡುವದು.

೧೫ ಬಾವಿಗಳನ್ನು ನಿರ್ಮಾಣ ಮಾಡುವದು.

೧೬ ಕೊಳವೆ ಬಾವಿಗಳನ್ನು ನಿರ್ಮಾಣ ಮಾಡುವದು.

೧೭ ಒಡ್ಡುಗಳ ನಿರ್ಮಾಣ ಮಾಡಿ ಅಂತರ್ಜಲ ಮಟ್ಟವನ್ನು ಹೆಚ್ಚಿಸುವದು.

೧೮ ಮಳೆ ನೀರಿನ ಕೊಯ್ಲು ಸ್ಥಾಪನೆ ಮಾಡುವದು.

೧೯ ಜಿನಗು ಕೆರೆಗಳ (ಇಂಗು ಕೆರೆಗಳ) ನಿರ್ಮಾಣ ಮಾಡುವದು.

೨೦ ಕೆರೆ ಕಾಲುವೆ ಮುಖಾಂತರ ರೈತರಿಗೆ ನೀರು ಒದಗಿಸುವದು.

೨೧ ಹಳ್ಳ ಹಾಗೂ ಕೊಳ್ಳ ಮೂಲಕ ನೀರಾವರಿ ಸೌಲಭ್ಯ ಒದಗಿಸುವದು.

೨೨ ಸಣ್ಣ ರೈತರಿಗೆ ಪಂಪ್‌ಸೆಟ್ಸ್ ಮುಖಾಂತರ ನೀರಾವರಿ ಸೌಲಭ್ಯ ಒದಗಿಸುವದು.

೨೩ ಸಣ್ಣ ನೀರಾವರಿ ರೈತರಿಗೆ ಸಹಾಯಧನ ಒದಗಿಸುವದು.

೨೪ ಹೊಸ ಯಂತ್ರಗಳ ಬಳಕೆಗೆ ಸಹಾಯಧನ ನೀಡುವದು.

೨೫ ಹನಿ ನೀರಾವರಿ ಯೋಜನೆಗೆ ಪ್ರೋತ್ಸಾಹ ನೀಡುವದು.

೨೬ ತಂತ್ರಜ್ಞಾನದ ಮೂಲಕ ರೈತರಿಗೆ ಮಾಹಿತಿ ಒದಗಿಸುವದು.

೨೭ ತುಂಡು ಜಮೀನಿನಲ್ಲಿ ಒಡ್ಡುಗಳ ನಿರ್ಮಾಣಕ್ಕೆ ನಿರ್ಬಂದ.

೨೮ ತುಂತುರು ನೀರಾವರಿಗೆ ಪ್ರೋತ್ಸಾಹ ನೀಡುವದು.

೨೯ ಇಂಗು ಗುಂಡಿಗಳ ನಿರ್ಮಾಣ ಮಾಡುವದು.

೩೦ ಸರ್ವ ಕಾಲಿಕ ಕಾಲುವೆ ನಿರ್ಮಾಣ ಮಾಡುವದು.

೩೧ ಭೂ ಸವೆತ ನಿಯಂತ್ರಣ.

೩೨ ಭೂ ಸಾರ ಸಂರಕ್ಷಣೆ.

೩೩ ಪ್ರವಾಹ ನಿಯಂತ್ರಣ.

**೩ ನೀರಾವರಿ ಕಾಮಗಾರಿಯ ವಿಂಗಡಣೆ ವ್ಯವಸ್ಥೆ**

ನೀರಾವರಿಯ ಮುಖ್ಯ ಉದ್ದೇಶವೆಂದರೆ ಬರ ಪೀಡಿತ ಪ್ರದೇಶಕ್ಕೆ ನೀರನ್ನು ಒದಗಿಸುವ ಒಂದು ಪ್ರಯತ್ನವಾಗಿದೆ. ಹಾಗೂ ನೀರಿನ ವ್ಯವಸ್ಥೆಯಲ್ಲಿ ಆಗುವ ಬದಲಾವಣೆಗೆ ಸ್ಪಂದಿಸಿ ತ್ವರಿತವಾಗಿ ನೀರಿನ ಸೌಲಭ್ಯ ಒದಗಿಸುವದು. ದೇಶದಲ್ಲಿ, ರಾಜ್ಯದಲ್ಲಿ, ಜಿಲ್ಲೆಯಲ್ಲಿ, ತಾಲೂಕಿನಲ್ಲಿ, ಗ್ರಾಮಗಳಲ್ಲಿ, ಮನೆಗಳಲ್ಲಿ, ಪ್ರತಿ ವ್ಯಕ್ತಿಗೂ ನೀರಿನ ಸೌಲಭ್ಯ ಬೇಕು. ಈ ನಿಟ್ಟಿನಲ್ಲಿ ನಾವು ಅಂದರೆ ಸರಕಾರ ಹಲವಾರು ಯೋಜನೆಗಳನ್ನು ರೂಪಿಸಿದರೂ, ಅದರಲ್ಲಿ ಎಲ್ಲಾ ಸ್ಥಳದಲ್ಲಿ ನೀರಿನ ವ್ಯವಸ್ಥೆಯಾಗಬೇಕಾದರೆ ಒಂದೇ ನೀರಿನ ಯೋಜನೆ ಜಾರಿ ಮಾಡದರೆ ಸಾಧ್ಯವಿಲ್ಲ.

ಅದಕ್ಕಾಗಿ ದೇಶದಲ್ಲಿ, ರಾಜ್ಯದಲ್ಲಿ, ಜಿಲ್ಲೆಯಲ್ಲಿ, ಹಾಗೂ ತಾಲೂಕಿನಲ್ಲಾಗಬೇಕಾದ ವ್ಯವಸ್ಥೆಯ ಬಗ್ಗೆ ಈ ಕೆಳಗಿನಂತೆ ತಿಳಿಯಬಹುದು.

ದೇಶದಲ್ಲಿ ನೀರು ಬೇಕಾದರೆ ದೇಶ ದೇಶಗಳ ನಡುವೇ ಇರುವ ಸಂಬಂಧಗಳ ಬಗ್ಗೆ ಯಾವುದೇ ತರಹದ ಭಿನ್ನಾಭಿಪ್ರಾಯಗಳು ಇದ್ದಲ್ಲಿ ಅವುಗಳನ್ನು ಬಗೆ ಹರಿಸಿ ನೀರಿನ ವ್ಯವಸ್ಥೆ ಕಲ್ಪಿಸುವುದು ಕೇಂದ್ರ ಸರಕಾರದ್ದಾಗಿದೆ.

ರಾಜ್ಯದಲ್ಲಿ ನೀರಿನ ವ್ಯವಸ್ಥೆಯಾಗಬೇಕಾದರೆ ರಾಜ್ಯ ರಾಜ್ಯಗಳ ನಡುವೆ ಇರುವ ಸಮಸ್ಯೆ ಬಗೆಹರಿಸಿ ರಾಜ್ಯದಲ್ಲಿ ಇರುವ ನದಿಗಳ ಜೋಡಣೆಯಿಂದ ರಾಜ್ಯದಲ್ಲಿ ನೀರನ್ನು ಒದಗಿಸಿಕೊಂಡು ರಾಜ್ಯದಲ್ಲಿ ಇರುವ ನೀರಿನ ವ್ಯವಸ್ಥೆ ಸರಿ ಮಾಡಿಕೊಳ್ಳುವದು ರಾಜ್ಯ ಸರಕಾರ ಮತ್ತು ಕೇಂದ್ರ ಸರಕಾರದ್ದಾಗಿದೆ.

ಜಿಲ್ಲೆಯಲ್ಲಿ ನೀರು ಬೇಕಾದರೆ ರಾಜ್ಯದಲ್ಲಿ ಇರುವ ದೊಡ್ಡ ನದಿಗಳಿಂದ ಆಣೆಕಟ್ಟುಗಳನ್ನು ನಿರ್ಮಾಣಮಾಡಿ ಕಾಲುವೆ ಮುಖಾಂತರವಾಗಿ ಅಥವಾ ಏತ ನೀರಾವರಿಯ ಯೋಜನೆ ಅಡಿಯಲ್ಲಿ ವ್ಯವಸ್ಥೆಯನ್ನು ಮಾಡಿಕೊಂಡು ಜಿಲ್ಲೆಗಳಲ್ಲಿ ನೀರಿನ ವ್ಯವಸ್ಥೆ ಮಾಡುವದು ರಾಜ್ಯ ಸರಕಾರದ ಯೋಜನೆಗಳ ಮೂಲಕ ಇವುಗಳನ್ನು ಜಾರಿಗೆ ತರುವುದು.

ತಾಲೂಕಿನಲ್ಲಿ ನೀರಿನ ವ್ಯವಸ್ಥೆ ಬೇಕಾದಲ್ಲಿ ನದಿಗೆ ಆಣ್ಣೆಕಟ್ಟು ನಿರ್ಮಾಣ ಮಾಡಿ ಬಂದ ನೀರಿನ ಮುಂಖಾತರ ಕಾಲುವೆ ನಿರ್ಮಾಣ ಮಾಡಿ ನೀರಿನ ವ್ಯವಸ್ಥೆ ಮಾಡುವದು, ಪಂಚಾಯತ ರಾಜ್ಯ, ಗ್ರಾಮೀಣಾಭಿವೃದ್ಧಿ ಇಲಾಖೆ, ಜಲ ಸಂಪನ್ಮೂಲ ಇಲಾಖೆ ಮೂಲಕ ಈ ವ್ಯವಸ್ಥೆಯನ್ನು ಜಾರಿಗೆ ತರುವುದುದಾಗಬೇಕು.

ತಾಲೂಕಿನಲ್ಲಿ ಬರುವ ಅನೇಕ ಗ್ರಾಮಗಳಲ್ಲಿ ಹಲವು ಕಡೆ ಮಳೆ ಕಡಿಮೆ ಇರುವ ಗ್ರಾಮಗಳು ನದಿಯ ಪಕ್ಕದಲ್ಲಿ ಇರುವ ಗ್ರಾಮಗಳನ್ನು ಬೇರೆ ಬೇರೆ ಮಾಡಿ ಮಳೆ ಕಡಿಮೆಯಾಗುವ ಗ್ರಾಮಕ್ಕೆ ನದಿಯಿಂದ ಬರುವ ಕಾಲುವೆ ನೀರನ್ನು ಉಪಕಾಲುವೆ ಅಥವಾ ಸಣ್ಣ ನೀರಾವರಿ ವ್ಯವಸ್ಥೆಯಲ್ಲು ಬರುವ ಕೆರೆ, ಬಾವಿ, ಕೊಳವೆ ಬಾವಿ ಬಾಂದರು ಮೂಲಕ ನೀರಿನ ವ್ಯವಸ್ಥೆ ಮಾಡುವುದು. ಗ್ರಾಮಗಳಲ್ಲಿ ಬರುವ ಮನೆಗಳಿಗೆ ನೀರಿನ ವ್ಯವಸ್ಥೆಯಾಗಬೇಕು. ಎಂದರೆ ಸ್ಥಳಿಯ ಇಲಾಖೆಯ (ಪುರಸಭೆ, ಗ್ರಾಮ ಪಂಚಾಯತ, ತಾಲೂಕು ಪಂಚಾಯತ, ಜಿಲ್ಲಾ ಪಂಚಾಯತ, ಪಟ್ಟಣ ಪಂಚಾಯತ, ಸಣ್ಣ ನೀರಾವರಿ ಇಲಾಖೆ) ಕಾರ್ಯಕ್ರಮದಡಿಯಲ್ಲಿ ನೀರಿನ ವ್ಯವಸ್ಥೆ ಮಾಡಿಕೊಳ್ಳುವದು.

ಈ ಮೇಲಿನ ಎಲ್ಲಾ ನೀರಿನ ವ್ಯವಸ್ಥೆಯಾಗಬೇಕಾದರೆ ಅದರಲ್ಲಿ ಬರುವ ಅನೇಕ ಸಾಮಾನ್ಯ ಜನರಿಗೆ ತೊಂದರೆಗಳಾದಾಗ ಸರಕಾರ ಅವರ ತೊಂದರೆಗಳಿಗೆ ಸ್ಪಂದಿಸಿ ಪರಿಹಾರ ನೀಡಿ ಯೋಜನೆಗಳನ್ನು ಜಾರಿಗೆ ತರುತ್ತದೆ.

## ನೀರಾವರಿ ಪ್ರಮುಖ ವಿಧಗಳು

ನೀರಾವರಿ ಪ್ರಮುಖ ವಿಧಗಳನ್ನು ಈ ಕೆಳಗಿನಂತೆ ವಿಶ್ಲೇಷಣೆ ಮಾಡಬಹುದು ಮುಖ್ಯವಾಗಿ ನೀರಾವರಿಯಲ್ಲಿ ಮೂರು ವಿಧಗಳಾಗಿ ವಿಂಗಡಿಸ ಬಹುದು.

**೧. ಬೃಹತ್ ನೀರಾವರಿ**

**೨. ಮಧ್ಯಮ ನೀರಾವರಿ**

**೩. ಸಣ್ಣ ನೀರಾವರಿ**

ಈ ಮೇಲೆ ಹೇಳಿದ ನೀರಾವರಿ ವಿಧಗಳನ್ನು ಅವುಗಳ ಕಾರ್ಯ ವ್ಯಾಪ್ತಿಯ ಮೇಲೆ ಹಾಗೂ ಕಾರ್ಯ ಯೋಜನೆಯ ಮೌಲ್ಯದ ಮೇಲೆ ಈ ವಿಂಗಡಣೆ ಮಾಡಲಾಗಿದೆ. ಈ ನೀರಾವರಿ ವಿಧಗಳಿಂದ ಅಥಣಿ ತಾಲೂಕಿನಲ್ಲಿ ಆದ ಅಭಿವೃದ್ಧಿಯ ಕಾರ್ಯ ಯೋಜನೆಗಳನ್ನು ಈ ಕೆಳಗಿನಂತೆ ನೋಡಬಹುದು.

### ೧. ಬೃಹತ್ ನೀರಾವರಿ

ಬೃಹತ್ ನೀರಾವರಿಯು ೧೦,೦೦೦ ಹೆಕ್ಟೇರಿಗಿಂತಲೂ ಅಧಿಕ ಸಾಗುವಳಿ ಮಾಡಬಹುದಾದ ವಲಯ ಪ್ರದೇಶವನ್ನು ಹೊಂದಿರುವ ನೀರಾವರಿ ವ್ಯವಸ್ಥೆಯ ಯೋಜನೆಗಳನ್ನು ಬೃಹತ್ ನೀರಾವರಿ ಯೋಜನೆಗಳಾಗಿವೆ. ಈ ಯೋಜನೆಯಲ್ಲಿ ಅಧಿಕ ಬಂಡವಾಳ ಬೇಕಾಗಿರುತ್ತದೆ. ಅವುಗಳನ್ನು ಪೂರ್ಣಗೊಳಿಸಲು ದೀರ್ಘಾವಧಿ ಬೇಕಾಗುತ್ತದೆ. ಆದಾಗ್ಯೂ ಅವುಗಳು ಬೃಹತ ನೀರಾವರಿ ಸಾಮರ್ಥ್ಯವನ್ನು ಹೊಂದಿರುತ್ತವೆ. ಅತೀ ಹೆಚ್ಚು ಬೃಹತ್ ಅಣೆಕಟ್ಟುಗಳನ್ನು ಹೊಂದಿರುವ ರಾಷ್ಟ್ರಗಳ ಪೈಕಿ ಭಾರತಕ್ಕೆ ಜಗತ್ತಿನಲ್ಲಿ ಮೂರನೇ ಸ್ಥಾನ ಲಭ್ಯವಿದೆ. ಬೃಹತ್ ಅಣೆಕಟ್ಟುಗಳ ಮೇಲಿನ ಅಂತರರಾಷ್ಟ್ರೀಯ ಸಮಿತಿ (ಐಸಿಓಎಲ್‌ಡಿ) ಯ ವ್ಯಾಖ್ಯಾನದ ಮೇರೆಗೆ ಭಾರತದ ೩೬೦೦ ಡ್ಯಾಂಗಳು ಬೃಹತ್ ಡ್ಯಾಂಗಳ ಪಟ್ಟಿಗೆ ಅರ್ಹತೆ ಗಳಿಸಿವೆ.[೫] ಬೃಹತ್ ನೀರಾವರಿ ಯೋಜನೆಯನ್ನು ಜಾರಿಗೆತರಲು ಸುಮಾರು ೫ ಕೋಟಿ ರೂಪಾಯಿಗಿಂತ ಹೆಚ್ಚಿನ ವೆಚ್ಚ ಮಾಡಿದರೆ ಅದು ಬೃಹತ್ ನೀರಾವರಿ ಯೋಜನೆಯಡಿಯಲ್ಲಿ ಬರುತ್ತವೆ.

### ೨ ಮಧ್ಯಮ ನೀರಾವರಿ

ಮಧ್ಯಮ ನೀರಾವರಿಯು ೨೦೦೦ ಹೆಕ್ಟೇರ ರಿಂದ ೧೦,೦೦೦ ಹೆಕ್ಟೇರ್ ಪ್ರದೇಶದವರೆಗೆ ಸಾಗುವಳಿ ಮಾಡಬಹುದಾದ ವಲಯ ಪ್ರದೇಶವನ್ನು ಹೊಂದಿರುವ ನೀರಾವರಿ ಯೋಜನೆಗಳು ಮಧ್ಯಮ ಪ್ರಮಾಣದ ನೀರಾವರಿ ಯೋಜನೆಗಳಾಗಿವೆ. ಇವುಗಳ ಪ್ರಮುಖ ಅನುಕೂಲಗಳೆಂದರೆ ಅವುಗಳು ಕಡಿಮೆ ವೆಚ್ಚದ್ದಾಗಿರುತ್ತವೆ, ಮತ್ತು ಕಡಿಮೆ ಅವಧಿಯಲ್ಲಿ ಪೂರ್ಣಗೊಳಿಸಬಹುದು. ಸಣ್ಣ ಅಣೆಕಟ್ಟೆಗಳ ನಿರ್ಮಾಣವು ಮಧ್ಯಮ ನೀರಾವರಿ ಯೋಜನೆಗಳ ವ್ಯಾಪ್ತಿಗೆ ಒಳಪಡುತ್ತವೆ.

---

೫. 'ಭಾರತದ ಆರ್ಥಿಕ ಅಭಿವೃದ್ಧಿ' – ಎಚ್ಚಾರ್ಕೆ. ಪ್ರಕಾಶನ ಸಪ್ನಾ ಬುಕ್ಕ ಹೌಸ್ – ೨೦೧೦. ಪುಟ ಸಂಖ್ಯೆ – ೧೭೬

ಮಧ್ಯಮ ನೀರಾವರಿ ಯೋಜನೆಗಳನ್ನು ಸುಮಾರು ೨೫ ಲಕ್ಷ ರೂಪಾಯಿಗಳಿಂದ ೫ ಕೋಟಿ ರೂಪಾಯಿಗಳ ವೆಚ್ಚದಲ್ಲಿ ಮಾಡಿದರೆ ಅವು ಮಧ್ಯಮ ನೀರಾವರಿ ಯೋಜನೆಗಳಯಡಿಯಲ್ಲಿ ಬರುತ್ತವೆ.

**೩. ಸಣ್ಣ ನೀರಾವರಿ**

ಸಣ್ಣ ನೀರಾವರಿಯು ೨೦೦೦ ಹೆಕ್ಟೇರ ಪ್ರದೇಶದವರೆಗೆ ಸಾಗುವಳಿ ಮಾಡಬಹುದಾದ ವಲಯ ಪ್ರದೇಶವನ್ನು ಹೊಂದಿರುವ ನೀರಾವರಿ ಯೋಜನೆಗಳು ಸಣ್ಣ ನೀರಾವರಿ ಯೋಜನೆಗಳಾಗಿವೆ. ಕೆರೆಗಳು, ಕೊಳವೆ ಬಾವಿಗಳು ಮುಂತಾದ ಸಣ್ಣ ನೀರಾವರಿ ಯೋಜನೆಗಳ ಪ್ರಮುಖ ಅನುಕೂಲಗಳೆಂದರೆ ಅವು ಕನಿಷ್ಠ ವೆಚ್ಚದಲ್ಲಿ ಅವುಗಳನ್ನು ಅಲ್ಪಕಾಲದಲ್ಲಿ ಪೂರ್ಣಗೊಳಿಸಬಹುದು ಮತ್ತು ಕೃಷಿ ಉತ್ಪಾದಕತೆ ಮೇಲಿನ ಅವುಗಳ ಪರಿಣಾಮಗಳನ್ನು ಕೂಡಲೆ ಅನುಭವಿಸಬಹುದು. ಸಣ್ಣ ನೀರಾವರಿ ಯೋಜನೆಯಡಿ ಅಭಿವೃದ್ಧಿಪಡಿಸಲಾದ ಒಟ್ಟು ನೀರಾವರಿ ಸಾಮರ್ಥ್ಯದ ೨೦೦೬-೦೭ ರ ವೇಳೆಗೆ ೬೦.೪ ದಶಲಕ್ಷ ಹೆಕ್ಟೇರುಗಳಷ್ಟಾಗಿದೆ. ಸಣ್ಣ ನೀರಾವರಿ ಯೋಜನೆಯನ್ನು ಜಾರಿಗೆ ತರಲು ಸುಮಾರು ೨೫ ಲಕ್ಷ ರೂಪಾಯಿಗಿಂತ ಕಡಿಮೆ ಇರುವ ವೆಚ್ಚ ತಗಲುಬಹುದಾದ ಯೋಜನೆಗಳಿಗೆ ಸಣ್ಣ ನೀರಾವರಿ ಯೋಜನೆಗಳು ಎಂದು ಹೇಳಬಹುದು.

**ಅಥಣಿ ತಾಲೂಕಿನ ಬೃಹತ್ ಹಾಗೂ ಮಧ್ಯಮ ನೀರಾವರಿ ಸಣ್ಣ ನೀರಾವರಿ ಹಿನ್ನೆಲೆ**

ಅಥಣಿ ತಾಲೂಲಿನಲ್ಲಿ ಬರುವ ಬೃಹತ್, ಮದ್ಯಮ ಹಾಗೂ ಸಣ್ಣ ನೀರಾವರಿ ಅಭೀವೃದ್ಧಿ ಯೋಜನೇಗಳ ಹಿನ್ನಲೆಯನ್ನು ತಿಳಿಯಲ್ಲು. ಅಥಣಿ ತಾಲೂಕಿನಲ್ಲಿ ಬರುವ ಹಿಪ್ಪರಗಿ ನೀರಾವರಿ ಯೋಜನೆಯ ಬಗ್ಗೆ ಸಂಕ್ಷೇಪ್ತ ಮಾಹಿತಿ ಈ ಕೇಳಗಿನಂತೆ ತಿಳಿಯಬಹುದು.

**ಹಿಪ್ಪರಗಿ ನೀರಾವರಿ ಯೋಜನೆಯ ಸಂಕ್ಷೇಪ್ತ ಪ್ರಗತಿಯ ಮಾಹಿತಿ**

- ಈ ಯೋಜನೆಗೆ ರೂಪಾಯಿ ೧,೫೨೧.೭೮ ಕೋಟಿಗಳಿಗೆ ಪ್ರಧಾನ ಮಂತ್ರಿಗಳ ಎ.ಆಯ್.ಬಿ.ಪಿ ಯೋಜನೆಯಲ್ಲಿ ಅನುಮೋದನೆ ದೊರೆತಿದೆ. [೬]
- ಒಟ್ಟು ೧೨.೧೦ ಟಿ.ಎಂ.ಸಿ ನೀರಿನ ಹಂಚಿಕೆಯಲ್ಲಿ ಕೃಷ್ಣಾ ನದಿಯ ಎಡದಂಡೆ ರೈತರಿಗಾಗಿ ೧೧.೬೪ ಟಿ.ಎಂ.ಸಿ ಪ್ರಮಾಣದ ನೀರನ್ನು ೭೪,೭೪೨ ಹೆಕ್ಟರ ಕ್ಷೇತ್ರದ ನೀರಾವರಿಗಾಗಿ ಹಾಗೂ ೦.೪೬ ಟಿ.ಎಂ.ಸಿ ಪ್ರಮಾಣದ ನೀರನ್ನು ಕೃಷ್ಣಾ ನದಿಯ ಎರಡೂ ದಂಡೆಯಲ್ಲಿ ಔದ್ಯೋಗಿಕರಣ ಮತ್ತು ಕುಡಿಯುವ ನೀರಿಗಾಗಿ ಉಪಯೋಗಿಸಲು ನಿಗದಿಪಡಿಸಲಾಗಿದೆ.
- ಬಹು ಮುಖ್ಯವಾದ ೨೨ ಸ್ಟಾಪ್‌ಲಾಗ್ ಗೇಟುಗಳ ಕಾಮಗಾರಿ ತಾಂತ್ರಿಕ ಕಾರಣಗಳಿಂದ ಪೂರ್ಣಗೊಂಡಿರುವದಿಲ್ಲಾ. ಈಗ ಮೂಲ ಗುತ್ತಿಗೆಯನ್ನು ರದ್ದುಗೊಳಿಸಿ ಹೊಸದಾಗಿ

೬. 'ಹಿಪ್ಪರಗಿ ನೀರಾವರಿ ನಿಗಮ' – ಹಿಪ್ಪರಗಿ ನೀರಾವರಿ ಯೋಜನೆಯ – ಸಂಕ್ಷಿಪ್ತ ಪ್ರಗತಿ ಮಾಹಿತಿ. ೨೦೧೪–೧೫

ಟೆಂಡರ ಕರೆದು ಬಾಕಿ ಉಳಿದ ಸ್ಟಾಪ್‌ಲಾಗ್ ಗೇಟ್ ಕೆಲಸವನ್ನು ದಿನಾಂಕ ೨೨.೦೭.೨೦೧೩ ರಂದು ದಾವಣಗೆರೆಯ ಮೆ॥ ನಂದಿ ಸ್ಟೀಲ್ ಪ್ರೊಡಕ್ಟ್ಸ ಗುತ್ತಿಗೆದಾರರಿಗೆ ನಿರ್ವಹಿಸಲು ರೂಪಾಯಿ ೨.೫೫ ಕೋಟಿಗಳಿಗೆ ಆಗದೇ ಇದ್ದುದ್ದರಿಂದ ೨೦೧೫ನೇ ಸಾಲಿನ ಬೇಸಿಗೆ ಸಮಯದಲ್ಲಿ ಈ ಕಾಮಗಾರಿಯನ್ನು ಪೂರ್ಣಗೊಳಿಸಲು ಯೋಜಿಸಲಾಗಿದೆ.

- ಆಣೆಕಟ್ಟು ಹಾಗೂ ಅದರ ಅಂಗಭಾಗಗಳು ಪೂರ್ಣಗೊಂಡಿದ್ದು. ಅವುಗಳಿಗೆ ಇಲ್ಲಿವರೆಗೆ ರೂಪಾಯಿ ೬೪೮೭.೩೫ ಲಕ್ಷಗಳು ಖರ್ಚಾಗಿರುತ್ತದೆ. ಸನ್ ೨೦೦೪ ರಿಂದ ಜಲಾಶಯದ ಪೂರ್ಣಮಟ್ಟದ ೫೨೪.೮೭ ಮೀಟರ್ ವರೆಗೆ ೬.೦೦ ಟಿ.ಎಂ.ಸಿ ಗಳ ನೀರನ್ನು ಮಳೆಗಾಲದ ನೀರು ನದಿಯಲ್ಲಿ ನಿಂತ ನಂತರ ಸಂಗ್ರಹಿಸಲಾಗಿರುತ್ತದೆ.
- ಆಣೆಕಟ್ಟು ಹಾಗೂ ಅದರ ಅಂಗಭಾಗಗಳ ಕಾಮಗಾರಿಗಳಿಗಾಗಿ ಇಲ್ಲಿವರೆಗೆ ರೂಪಾಯಿ ೬,೪೮೭.೩೫ ಲಕ್ಷಗಳಷ್ಟು ಖರ್ಚಾಗಿರುತ್ತದೆ.
- ಅಥಣಿ ತಾಲೂಕಿನಲ್ಲಿ ಬರುವ ಹಿಪ್ಪರಗಿ ನೀರಾವರಿ ಯೋಜನಾ ಕಾಮಗಾರಿಗ ಅಭೀವೃದ್ಧಿಯ ಸಲುವಾಗಿ. ಉಪ ವಿಭಾಗಗಳನ್ನು ಮಾಡಿ ಕಾಮಗಾರಿಗಳನ್ನು ವಿಂಗಡನೆ ಮಾಡಲಾಗಿದೆ.

**ಹಿಪ್ಪರಗಿ ನೀರಾವರಿ ಯೋಜನೆಯ ಉಪ ವಿಭಾಗಗಳು**

೧. ಐನಾಪೂರ ಏತ ನೀರಾವರಿ.

೨. ಹಲ್ಯಾಳ ಏತ ನೀರಾವರಿ.

೩. ಕರಿಮಸೂತಿ ಏತ ನೀರಾವರಿ.

೪. ಸಾವಳಗಿ–ತುಂಗಳ ಏತ ನೀರಾವರಿ.

ಅಥಣಿ ತಾಲೂಕಿನಲ್ಲಿ ಬೃಹತ್ ಹಾಗೂ ಮಾದ್ಯಮ ನೀರಾವರಿ ಯೋಜನೆಯಡಿಯಲ್ಲಿ. ಬರುವ ಈ ಹಿಪ್ಪರಗಿ ನೀರಾವರಿ ಯೋಜನೆಯ ಉಪ ವಿಭಾಗಗಳ ಸಂಕ್ಷಿಪ್ತ ಪ್ರಗತಿಯ ಮಾಹಿತಿ ಈ ಕೆಳಗಿನಂತ್ತಿದೆ.

**೧ ಐನಾಪೂರ ಏತ ನೀರಾವರಿ ಯೋಜನೆ**

೩.೨೧ ಟಿ.ಎಂ.ಸಿ ನೀರನ್ನು ಬಳಸಿಕೊಂಡು ಕೃಷ್ಣಾ ನದಿಯ ಎಡ ಭಾಗದದಲ್ಲಿ ಸುಮಾರು ೨೧,೬೬೨ ಹೆಕ್ಟೇರ ಪ್ರದೇಶವನ್ನು ನೀರಾವರಿ ವ್ಯಾಪ್ತಿಗೆ ಒಳಪಡಿಸಲಾಗುತ್ತಿದೆ. ಇದರಲ್ಲಿ ೧೨,೯೨೨ ಹೆಕ್ಟೇರ ಪ್ರದೇಶವು ಖಾಸಗಿ ಪೈಪಲೈನ ಮುಖಾಂತರ ನೀರಾವರಿಗೆ ಒಳಪಟ್ಟಿರುತ್ತದೆ.

## ಐನಾಪೂರ ಏತ ನೀರಾವರಿ ಯೋಜನೆಯ ಹಂತಗಳು

**ಅ ಒಂದನೇ ಹಂತ**

- ಪೂರ್ವ ಮುಖ್ಯ ಕಾಲುವೆ ಉದ್ದ ೨೭.೫೨ ಕಿಲೋ ಮೀಟರ ಇದರಲ್ಲಿ ೧೧ ವಿತರಣಾ ನಾಲೆಗಳಿದ್ದು ಅದರಲ್ಲಿ ಪೂರ್ವ ಕಾಲುವೆಯಲ್ಲಿ ೫ ವಿತರಣಾ ಕಾಲುವೆಗಳಿಂದ ೧೭೬೦ ಹೆಕ್ಟೇರ ಕ್ಷೇತ್ರ ಹಾಗೂ ಪಶ್ಚಿಮ ಕಾಲುವೆಯಲ್ಲಿ ೩ ವಿತರಣಾ ಕಾಲುವೆಗಳಿಂದ ೧೦೫೦ ಹೆಕ್ಟೇರ್ ಕ್ಷೇತ್ರವು ನೀರಾವರಿ ವ್ಯಾಪ್ತಿಗೆ ಒಳಪಡುತ್ತದೆ. ಸದರಿ ಮುಖ್ಯ ಕಾಲುವೆ ಹಾಗೂ ವಿತರಣಾ ಕಾಲುವೆಗಳಲ್ಲಿ ನೀರನ್ನು ಹರಿಸಲಾಗುತ್ತಿದೆ. ಹೊಲಗಾಲುವೆಗಳನ್ನು ಕೈಗೆತ್ತಿಕೊಳ್ಳಲಾಗಿದ್ದು. ಟೆಂಡರ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ.
- ಈ ಯೋಜನೆಯ ಅಂದಾಜು ಮೊತ್ತ ರೂಪಾಯಿ ೯,೯೩೪.೦೦ ಲಕ್ಷಗಳಿದ್ದು ಇದರಲ್ಲಿ ಇಲ್ಲಿಯವರೆಗೆ ರೂಪಾಯಿ ೯,೧೧೨.೩೧ ಲಕ್ಷಗಳಷ್ಟು ಖರ್ಚಾಗಿರುತ್ತದೆ.
- ಈ ಯೋಜನೆಯಿಂದ ೧. ಐನಾಪೂರ ೨. ಕೃಷ್ಣಾ ಕಿತ್ತೂರ ೩. ಕಾತ್ರಾಳ ೪. ಬಣಜವಾಡ ೫. ಮೋಳೆ ೬. ತಂಗಡಿ ೭. ಮುರಗುಂಡಿ ೮. ಅಗ್ರಾಣಿ ಇಂಗಳಗಾಂವ ೯ ಮಸರಗುಪ್ಪಿ ೧೦. ಮಂಗಸೂಳಿ ಗ್ರಾಮಗಳು ನೀರಾವರಿ ಸೌಲಭ್ಯಕ್ಕೆ ಒಳಪಡುತ್ತವೆ.

**ಆ ಎರಡನೇ ಹಂತ**

- ೦.೮೦ ಟಿ.ಎಂ.ಸಿ ನೀರನ್ನು ಬಳಸಿಕೊಂಡು ಸುಮಾರು ೬೨೨೯ ಹೆಕ್ಟೇರ ಪ್ರದೇಶವನ್ನು ನೀರಾವರಿ ವ್ಯಾಪ್ತಿಗೆ ಒಳಪಡುತ್ತದೆ.
- ಪೂರ್ವ ಮುಖ್ಯ ಕಾಲುವೆ ಉದ್ದ ೩೦ ಕಿಲೋ ಮೀಟರ್ ಇದ್ದು. ೧೩ ವಿತರಣಾ ನಾಲೆಗಳಿದ್ದು, ವಿತರಣಾ ನಾಳೆ ೧೨ ಮತ್ತು ೧೩ ಕ್ಕೆ ಅಂದಾಜು ಸಲ್ಲಿಸಿದ್ದು, ಇವನ್ನು ಹೊರತು ಪಡಿಸಿ ಎಲ್ಲಾ ಕಾಮಗಾರಿಗಳು ಪೂರ್ಣಗೊಂಡಿವೆ. ಹಾಗೂ ಪಶ್ಚಿಮ ಕಾಲುವೆ ಉದ್ದ ಕಿಲೋ ಮೀಟರ್ ೬.೨೫ ಇದದ್ದು, ೨ ವಿತರಣಾ ನಾಲೆಗಳಿದ್ದು ಎಲ್ಲಾ ಕಾಮಗಾರಿಗಳು ಪೂರ್ಣಗೊಂಡಿರುತ್ತದೆ. ಹೊಲಗಾಲುವೆ ಕಾಮಗಾರಿಗಳನ್ನು ಕೈಕೊಳ್ಳಲಾಗಿದ್ದು ಟೆಂಡರ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. ೨೦೧೫-೧೬ ನೇ ಸಾಲಿನಲ್ಲಿ ಪೂರ್ಣಗೊಳಿಸಲು ರೂಪಿಸಲಾಗಿದೆ. ೨೦೧೨-೧೩ನೇ ಸಾಲಿನಿಂದ ನೀರನ್ನು ಪ್ರಾಯೋಗಿಕವಾಗಿ ಹರಿಸಲಾಗುತ್ತಿದೆ.
- ಈ ಯೋಜನೆಯ ಅಂದಾಜು ಮೊತ್ತ ರೂಪಾಯಿ ೪,೯೨೪.೧೩ ಲಕ್ಷಗಳಿದ್ದು ಇದರಲ್ಲಿ ೨ ದೊಡ್ಡ ಅಕ್ವಡಕ್ಟಗಳು ಬಂದದ್ದರಿಂದ ಇಲ್ಲಿಯವರೆಗೆ ರೂಪಾಯಿ ೧೭,೨೬೩.೦೦ ಲಕ್ಷಗಳಷ್ಟು ಖರ್ಚಾಗಿರುತ್ತದೆ.

- ಈ ಯೋಜನೆಯಿಂದ ೧. ಉಗಾರ ಕೆ ಎಚ್ ೨. ಶೇಡಬಾಳ ೩. ಕೆಂಪವಾಡ ೪. ಲೋಕುರ ೫. ಹಣಮಾಪೂರ ೬. ನವಲಿಹಾಳ ೭. ಸಿದ್ದೇವಾಡಿ ೮. ಮಧಬಾಂವಿ ೯. ಮೋಳೆ ಗ್ರಾಮಗಳು ನೀರಾವರಿ ಸೌಲಭ್ಯ ಪಡೆಯುವವು.

೨ **ಹಲ್ಯಾಳ ಏತ ನೀರಾವರಿ**

**೧ ನೇ ಮತ್ತು ೨ ನೇ ಹಂತ**

- ೩.೫೩ ಟಿ.ಎಂ.ಸಿ ನೀರನ್ನು ಬಳಸಿಕೊಂಡು ಸುಮಾರು ೨೦,೬೩೫ ಹೆಕ್ಟೇರ್ ಪ್ರದೇಶವನ್ನು ನೀರಾವರಿ ವ್ಯಾಪ್ತಿ ಒಳಪಡುತ್ತದೆ. ಇದರಲ್ಲಿ ೧೩,೭೦೦ ಹೆಕ್ಟೇರ್ ಪ್ರದೇಶವು ಖಾಸಗಿ ಪೈಪಲೈನ ಮುಖಾಂತರ ನೀರಾವರಿಗೆ ಒಳಪಟ್ಟಿರುತ್ತದೆ.

- ಪೂರ್ವ ಮುಖ್ಯ ಕಾಲುವೆ ಉದ್ದದ ೪೦ ಕಿಲೋ ಮೀಟರ್ ಇದರಲ್ಲಿ ೨೧ ವಿತರಣಾ ನಾಲೆಗಳಿದ್ದು ಅದರಲ್ಲಿ ಮೊದಲಿನ ೧ ರಿಂದ ೧೫ ವಿತರಣಾ ನಾಲೆಗಳಲ್ಲಿ ಹಾಗೂ ಔಟಲೆಟ್ ೧ ರಿಂದ ೩ ರಲ್ಲಿ ರೈತರು ಖಾಸಗಿಯಾಗಿ ತಮ್ಮ ಕ್ಷೇತ್ರವನ್ನು ನೀರಾವರಿಗೆ ಒಳಪಡಿಸಿರುವದರಿಂದ ಕಾಮಗಾರಿಗಳನ್ನು ಕೈಗೊಂಡಿರುವದಿಲ್ಲ. ಬಾಕಿ ೧೬ ರಿಂದ ೨೧ರ ವರೆಗಿನ ವಿತರಣಾ ನಾಲೆಗಳು ಹಾಗೂ ೪ ರಿಂದ ೧೦ರ ವರೆಗಿನ ಔಟಲೆಟ್ ಕಾಮಗಾರಿಗಳು ಪೂರ್ಣಗೊಂಡಿರುತ್ತವೆ. ಪಶ್ಚಿಮ ಮುಖ್ಯ ಕಾಲುವೆ ಉದ್ದ ಕಿಲೋ ಮೀಟರ್ ೨೨ ಇದರಲ್ಲಿ ೯ ವಿತರಣಾ ನಾಲೆಗಳು ಇದ್ದು ಅದರಲ್ಲಿ ಮೊದಲಿನ ೧ ರಿಂದ ೪ ವಿತರಣಾ ನಾಲೆಗಳಲ್ಲಿ ಹಾಗೂ ಔಟಲೆಟ್ ೧ ರಿಂದ ೪ರಲ್ಲಿ ರೈತರು ಖಾಸಗಿಯಾಗಿ ತಮ್ಮ ಕ್ಷೇತ್ರವನ್ನು ನೀರಾವರಿಗೆ ಒಳಪಡಿಸಿರುವದರಿಂದ ಕಾಮಗಾರಿಗಳನ್ನು ಕೈಗೊಂಡಿರುವದಿಲ್ಲ, ಬಾಕಿ ೫ ರಿಂದ ೯ ರ ವರೆಗಿನ ವಿತರಣಾ ನಾಲೆಗಳು ಹಾಗೂ ೪ ರಿಂದ ೧೩ ರ ವರೆಗಿನ ಔಟಲೆಟ್ ಕಾಮಗಾರಿಗಳು ಪೂರ್ಣಗೊಂಡಿರುತ್ತವೆ.

- ಈ ಯೋಜನೆಗೆ ೬+೧ ಪಂಪುಗಳು ೧ ನೇ ಹಂತದಲ್ಲಿ ಹಾಗೂ ೬+೧ ಪಂಪುಗಳು ನೇ ಹಂತದಲ್ಲಿ ಬೇಕಾಗಿರುತ್ತದೆ ಆದರೆ ಈವರೆವಿಗೆ ೩+೧ ಮತ್ತು ೩+೧ ಪಂಪುಗಳನ್ನು ಅಳವಡಿಸಲಾಗಿರುತ್ತದೆ. ಇನ್ನೂ ೧ ನೇ ಹಂತದಲ್ಲಿ ೩ ಪಂಪು ಮತ್ತು ೨ ನೇ ಹಂತದಲ್ಲಿ ೩ ಪಂಪುಗಳನ್ನು ಅಳವಡಿಸುವ ಕಾಮಗಾರಿಯನ್ನು ದಿನಾಂಕ ೦೪/೦೭/೨೦೧೪ ರಂದು ಮೆ॥ ಆದಿತ್ಯ ಕನ್‌ಸ್ಟ್ರಕ್ಷನ್ ಇವರಿಗೆ ವಹಿಸಿಕೊಡಲಾಗಿದ್ದು ಕಾಮಗಾರಿಯು ಪ್ರಗತಿಯಲ್ಲಿರುತ್ತದೆ.

- ಈ ಸಾಲಿನಲ್ಲಿ ಹೊಲಗಾಲುವೆಗಳನ್ನು ಕೈಗೆತ್ತಿಕೊಳ್ಳಲಾಗಿದ್ದು ಟೆಂಡರ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. ಹಲ್ಯಾಳ ಪೂರ್ವ ಹಾಗೂ ಪಶ್ಚಿಮ ಕಾಲುವೆ ಟೆಂಡರ ಪ್ರಕ್ರಿಯೆ

ಕೈಕೊಳ್ಳದ ಬಾಕಿ ೫೦೦೧ ಹೆಕ್ಟೇರ ಕ್ಷೇತ್ರವನ್ನು ಕಾಡಾ ಪ್ರಾಧಿಕಾರಕ್ಕೆ ಹಸ್ತಾಂತರಿಸಲಾಗಿದೆ.

- ೨೦೧೨-೧೩ನೇ ಸಾಲಿನಿಂದ ಮಳೆಗಾಲದಲ್ಲಿ ಮೇಲಿನ ಎಲ್ಲಾ ಕಾಲುವೆಗಳಲ್ಲಿ ನೀರನ್ನು ಹರಿಸಲಾಗುತ್ತದೆ.
- ಈ ಯೋಜನೆಯ ಅಂದಾಜು ಮೊತ್ತ ರೂಪಾಯಿ ೧೪೨೬೫.೦೦ ಲಕ್ಷಗಳಿದ್ದು ಇದರಲ್ಲಿ ಇಲ್ಲಿಯವರೆಗೆ ರೂಪಾಯಿ ೧೮೧೬೧.೦೮ ಲಕ್ಷಗಳಷ್ಟು ಖರ್ಚಾಗಿರುತ್ತದೆ.
- ಈ ಯೋಜನೆಯಿಂದ ೧. ಅಥಣಿ ೨. ಹಲ್ಯಾಳ ೩. ಅವರಖೋಡ ೪. ಸತ್ತಿ ೫. ನಂದೇಶ್ವರ ೬. ನಾಗನೂರ ೭. ಸವದಿ ೭. ನಂದಗಾಂವ ೯ ಬಳವಾಡ ೧೦. ಶಿರಹಟ್ಟಿ ೧೧. ಕೊಕಟನೂರ ೧೨. ಹುಲಗಬಾಳಿ ೧೩. ಶಿನಾಳ ೧೪. ಸುಟ್ಟಟ್ಟಿ ೧೫. ರಡ್ಡೇರಹಟ್ಟಿ ೧೬. ಕರ್ಲಟ್ಟಿ ೧೭. ಜನವಾಡ ೧೮. ದೊಡವಾಡ ೧೯. ವಡ್ರಟ್ಟಿ ಗ್ರಾಮಗಳು ನೀರಾವರಿ ಸೌಲಭ್ಯ ಪಡೆದಿವೆ.

**೩. ಕರಿಮಸೂತಿ ಏತ ನೀರಾವರಿ ಯೋಜನೆ**

೩.೪೯ ಟಿ.ಎಂ.ಸಿ ನೀರನ್ನು ಬಳಸಿಕೊಂಡು ಅಥಣಿ ತಾಲೂಕಿನ ಸುಮಾರು ೨೩,೧೦೦ ಹೆಕ್ಟೇರ ಪ್ರದೇಶವು ನೀರಾವರಿ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ೧ ನೇ ಹಂತದಲ್ಲಿ ೩.೦೨ ಟಿ.ಎಂ.ಸಿ. ನೀರನ್ನು ಬಳಸಿಕೊಂಡು ಸುಮಾರು ೧೯೮೦೦ ಹೆಕ್ಟೇರ ಪ್ರದೇಶವು ನೀರಾವರಿ ವ್ಯಾಪ್ತಿಗೆ ಒಳಡುತ್ತವೆ.

**ಕರಿಮಸೂತಿ ನೀರಾವರಿ ಯೋಜನೆಯ ಹಂತಗಳು**

**ಅ. ಒಂದನೇ ಹಂತ**

- ಪೂರ್ವ ಮುಖ್ಯ ಕಾಲುವೆ ಉದ್ದ ೭೫ ಕಿಲೋ ಮೀಟರ ಇದರಲ್ಲಿ ೩೯ ವಿತರಣಾ ನಾಲೆಗಳು ೫೫ ಔಟಲೆಟ್‌ಗಳ ಎಲ್ಲ ಕಾಮಗಾರಿಗಳು ಪೂರ್ಣಗೊಂಡಿದೆ. ಹಾಗೂ ಪಶ್ಚಿಮ ಕಾಲುವೆ ಉದ್ದ ೩೭ ಕಿಲೋ ಮೀಟರ್ ಇದ್ದು ಇದರಲ್ಲಿನ ೧೪ ವಿತರಣಾ ನಾಲೆಗಳು ಮತ್ತು ೨೨ ಔಟಲೆಟ್‌ಗಳ ಕಾಮಗಾರಿಗಳು ಪೂರ್ಣಗೊಂಡಿದೆ. ಸದರಿ ಸಾಲಿನಲ್ಲಿ ಹೊಲಗಾಲುವೆ ಕಾಮಗಾರಿಗಳ ಟೆಂಡರ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ.
- ೨೦೧೨-೧೩ ಸಾಲಿನಿಂದ ಮಳೆಗಾಲದಲ್ಲಿ ನೀರು ಹರಿಸಲಾಗಿದೆ. ರೂಪಾಯಿ ೨೮೧೫೩೦೦ ಲಕ್ಷಗಳಿದ್ದು ಇದರಲ್ಲಿ ಇಲ್ಲಿಯವರಿಗೆ ರೂಪಾಯಿ. ೩೫೦೦೫.೦೦ ಲಕ್ಷಗಳಷ್ಟು ಖರ್ಚಾಗಿರುತ್ತದೆ.
- ಈ ಯೋಜನೆಯಿಂದ ೧ ನಂದಗಾಂವ ೨. ಕಟಗೇರಿ ೩. ಬಡಚಿ ೪. ಅಥಣಿ ೫. ಚಮಕೇರಿ ೬. ಯಕ್ಕಂಚಿ ೭. ಯಲಿಹಡಲಗಿ ೮. ಅಡಹಳ್ಳಿ ೯. ಕೋಹಳ್ಳಿ ೧೦. ಐಗಳಿ

೧೧. ಕೊಕಟನೂರ ೧೨. ಬುರ್ಲಟ್ಟಿ ೧೩. ದೇವರಡ್ಡೇರಹಟ್ಟಿ ೧೪ ಕೊಡಗಾನೂರ ೧೫. ದೇಸಾರಟ್ಟಿ ೧೬. ಖೋತನಟ್ಟಿ ೧೭. ಬಾಡಗಿ ೧೮. ಅರಟಾಳ ೧೯. ಸಂಕೋನಟ್ಟಿ ೨೦. ಪಾರ್ಥನಹಳ್ಳಿ ೨೧. ಗುಂಡೇವಾಡಿ ೨೨. ಅಬ್ಬೀಹಾಳ ೨೩. ಹೊಸಟ್ಟಿ ಈ ಗ್ರಾಮಗಳು ನೀರಾವರಿ ಸೌಲಭ್ಯಕ್ಕೆ ಒಳಪಡುತ್ತವೆ.

**ಆ. ಎರಡನೇ ಹಂತ**

- ೦.೪೭ ಟಿ.ಎಂ.ಸಿ ನೀರನ್ನು ಬಳಸಿಕೊಂಡು ಸುಮಾರು ೩೩೦೦ ಹೆಕ್ಟೇರ ಪ್ರದೇಶವನ್ನು ನೀರಾವರಿ ವ್ಯಾಪ್ತಿಗೆ ಒಳಪಡುತ್ತದೆ.
- ಉತ್ತರ ಮುಖ್ಯ ಕಾಲುವೆ ಉದ್ದ ೯ ಕಿಲೋ ಮೀಟರ ಕಾಮಗಾರಿಗಳು ಪೂರ್ಣಗೊಂಡಿದ್ದು ಹಾಗೂ ಇದರಲ್ಲಿನ ೩ ವಿತರಣಾ ನಾಲೆಗಳಲ್ಲಿ ಒಂದು ಪೂರ್ಣಗೊಂಡಿದೆ. ಮತ್ತು ೨ ಮತ್ತು ೩ರ ಸರ್ವೆ ಮತ್ತು ಅಂದಾಜು ಪತ್ರಿಕೆ ತಯಾರಿಯಲ್ಲಿದೆ ದಕ್ಷಿಣ ಕಾಲುವೆ ಉದ್ದ ೫ ಕಿಲೋ ಮೀಟರ್ ಕಾಮಗಾರಿಗಳು ಪೂರ್ಣಗೊಂಡಿದೆ. ಪಂಪಹೌಸ ರೈಜಿಂಗ್ಮೆನ್ ಕಾಮಗಾರಿ ಪೂರ್ಣಗೊಂಡಿದ್ದು, ಅಗಷ್ಟ ೨೦೧೩ ರಿಂದ ಎಲ್ಲಾ ಕಾಲುವೆಗಳಲ್ಲಿ ಮಳೆಗಾಲದಲ್ಲಿ ನೀರನ್ನು ಹರಿಸಲಾಗುತ್ತಿದೆ.
- ಈ ಯೋಜನೆಯ ಎಲ್ಲ ೩೩೦೦ ಹೆಕ್ಟೇರ ಕ್ಷೇತ್ರದ ಪ್ರದೇಶವನ್ನು ಕಾಡಾ ಪ್ರಾಧಿಕಾರಕ್ಕೆ ಹಸ್ತಾಂತರಿಸಲು ಕ್ರಮ ಕೈಕೊಳ್ಳಲಾಗಿದೆ.
- ಈ ಯೋಜನೆಯ ಅಂದಾಜು ಮೊತ್ತ ರೂಪಾಯಿ ೬,೧೩೫.೦೦ ಲಕ್ಷಗಳಿದ್ದು ಇದರಲ್ಲಿ. ಇಲ್ಲಿಯವರೆಗೆ ರೂಪಾಯಿ ೪,೮೨೭.೦೦ ಲಕ್ಷಗಳಷ್ಟು ಖರ್ಚಾಗಿರುತ್ತದೆ.
- ಈ ಯೋಜನೆಯಿಂದ ೧. ಕಕಮರಿ ೨. ಫಡತರವಾಡಿ ೩. ಕನಾಳ ೪. ರಾಮತೀರ್ಥ ೫. ತೇಲಸಂಗ ೬. ಖಿಲಾದಡ್ಡಿ ಹಾಗೂ ೭. ಬನ್ನೂರ ಈ ಗ್ರಾಮಗಳು ನೀರಾವರಿ ಸೌಲಭ್ಯ ಪಡೆಯುವವು

**೪ ಸಾವಳಗಿ– ತುಂಗಳ ಏತ ನೀರಾವರಿ ಯೋಜನೆ (ಅಥಣಿ ಮತ್ತು ಜಮಖಂಡಿ)**

- ೩.೪೯ ಟಿ.ಎಂ.ಸಿ ನೀರನ್ನು ಬಳಸಿಕೊಂಡು ಸುಮಾರು ೯,೦೪೫ ಹೆಕ್ಟೇರ ಪ್ರದೇಶವನ್ನು ನೀರಾವರಿ ವ್ಯಾಪ್ತಿಗೆ ಒಳಪಟ್ಟಿರುತ್ತದೆ.
- ಪೂರ್ವ ಮುಖ್ಯ ಕಾಲುವೆ ಉದ್ದ ೨೪ ಕಿಲೋ ಮೀಟರ ಇದರಲ್ಲಿ ೧೮ ವಿತರಣಾ ನಾಲೆಗಳು ೯ ಮತ್ತು ೧೫ ರಲ್ಲಿ ರೈತರ ತಕರಾರಿನಿಂದಾಗಿ ಕೆಲಸ ಕುಂಠಿತಗೊಂಡಿರುತ್ತದೆ. ಹಾಗೂ ವಿತರಣಾ ನಾಲೆ ೧೦ ರಲ್ಲಿ ಹೆಚ್ಚುವರಿ ಆರ್ಥಿಕ ಪ್ರಸ್ತಾವನೆ ಸಲ್ಲಿಸಲಾಗಿರುತ್ತದೆ. ೧೨ ಔಟಲೆಟ್‌ಗಳು ಪೂರ್ಣಗೊಂಡಿದೆ. ಹಾಗೂ ಪಶ್ಚಿಮ ಕಾಲುವೆ ಉದ್ದ ೭.೫ ಕಿಲೋ ಮೀಟರ್ ಇದ್ದು ಇದರಲ್ಲಿನ ೫ ವಿತರಣಾ

ನಾಲೆಗಳ ಕಾಮಗಾರಿಗಳು ಪೂರ್ಣಗೊಂಡಿರುತ್ತದೆ. ೨೦೧೨-೧೩ ನೇ ಸಾಲಿನಿಂದ ಪ್ರಾಯೋಗಿಕವಾಗಿ ಎಲ್ಲ ನಾಲೆಗಳಲ್ಲಿ ನೀರನ್ನು ಹರಿಸಲಾಗುತ್ತಿದೆ.

- ೨೦೧೩-೧೪ ನೇ ಸಾಲಿನಲ್ಲಿ ಹೊಲಗಾಲುವೆ ಕಾಮಗಾರಿಗಳನ್ನು ಕೈಕೊಳ್ಳಲಾಗಿದ್ದು, ಅವುಗಳು ವಿವಿಧ ಹಂತದಲ್ಲಿರುತ್ತವೆ.
- ಈ ಯೋಜನೆ ಅಂದಾಜು ಮೊತ್ತ ರೂಪಾಯಿ ೭೫೪.೦೦ ಲಕ್ಷಗಳಿದ್ದು ಇದರಲ್ಲಿ ಇಲ್ಲಿಯವರಿಗೆ ರೂಪಾಯಿ. ೯೦೮೧.೪೪ ಲಕ್ಷಗಳಷ್ಟು ಖರ್ಚಾಗಿರುತ್ತದೆ.
- ಈ ಯೋಜನೆಯಿಂದ ೧. ತುಂಗಳ ೨. ಸಾವಳಗಿ ೩. ಕುರಗೋಡ ೪. ಕನ್ನೋಳಿ ೫. ಗದ್ಯಾಳ ೬. ತೊದಲಬಾಗಿ ೭. ಅರಟಾಳ ೮. ಬಾಡಗಿ ೯. ಸುಟ್ಟಟ್ಟಿ ೧೦. ಕೊಕಟನೂರ ಈ ಗ್ರಾಮಗಳು ನೀರಾವರಿ ಸೌಲಭ್ಯಕ್ಕೆ ಒಳಪಡುತ್ತವೆ.

**ಹಿಪ್ಪರಗಿ ನೀರಾವರಿ ಯೋಜನೆ**

- ಈ ವಿಭಾಗದಡಿಯಲ್ಲಿ ಬರುವ ಹಿಪ್ಪರಗಿ ನೀರಾವರಿ ಯೋಜನೆ ಕಾಮಗಾರಿಗಳಿಗಾಗಿ ಇಲ್ಲಿಯವರೆಗೆ ರೂ ೧,೧೩೬.೩೬ ಕೋಟಿಗಳಷ್ಟು ಖರ್ಚಾಗಿರುತ್ತದೆ.
- ೨೦೧೪-೧೫ ನೇ ಸಾಲಿನಲ್ಲಿ ಹಿಪ್ಪರಗಿ ನೀರಾವರಿ ಯೋಜನೆಗಾಗಿ ರೂಪಾಯಿ ೪೦.೦೦ ಕೋಟಿ ಅನುದಾನವನ್ನು ಮಂಜೂರು ಮಾಡಿರುತ್ತಾರೆ.
- ಮಾರ್ಚ ೨೦೧೪ ರ ವರೆಗೆ ಒಟ್ಟು ೭,೧೫೯೨. ಹೇಕ್ಟರ ತೂಗುಗಾಲುವೆ ಕ್ಷೇತ್ರವನ್ನು ನಿರ್ಮಿಸಲಾಗಿದೆ. ಬಾಕಿ ಉಳಿದ ೩,೧೫೦ ಹೇಕ್ಟರ ಪ್ರದದೇಶವನ್ನು ಈ ಸಾಲಿನಲ್ಲಿ ನಿರ್ಮಿಸಲಾಗುವುದು.
- ಮಾರ್ಚ ೨೦೧೪ರ ವರೆಗೆ ೩,೫೫೮ ಹೆಕ್ಟೇರ ಕ್ಷೇತ್ರಕ್ಕೆ ಹೊಲಗಾಲುವೆ (ಎಪ್.ಐ.ಸಿ)ನಿರ್ಮಿಸಲಾಗಿದೆ. ೧೭,೦೪೩ ಹೇಕ್ಟರ ಹೊಲಗಾಲುವೆ (ಎಫ್.ಐ.ಸಿ)ಕ್ಷೇತ್ರಕ್ಕೆ ಟೆಂಡರನ್ನು ಆಹ್ವಾನಿಸಿದ್ದು, ಟೆಂಡರ ಪ್ರಕ್ರಿಯೆ ಚಾಲ್ತಿಯಲ್ಲಿದೆ. ಹಲ್ಯಾಳ ಪೂರ್ವ ಹಾಗೂ ಪಶ್ಚಿಮ ಕಾಲುವೆ ಟೆಂಡರ ಪ್ರಕ್ರಿಯೆ ಕೈಕೊಳ್ಳದ ಬಾಕಿ ೫,೦೦೧ ಹೆಕ್ಟೇರ ಕ್ಷೇತ್ರವನ್ನು ಕಾಡಾ ಪ್ರಾಧಿಕಾರಕ್ಕೆ ಹಸ್ತಾಂತರಿಸಲಾಗಿದೆ. ಕರಿಮಸೂತಿ ಐತ ನೀರಾವರಿ ಯೋಜನೆ (೨ನೇ ಹಂತ) ೩,೩೦೦ ಹೆಕ್ಟೇರ ಕ್ಷೇತ್ರದ ಪ್ರದೇಶವನ್ನು ಕಾಡಾ ಪ್ರಾಧಿಕಾರಕ್ಕೆ ಹಸ್ತಾಂತರಿಸಲು ಕ್ರಮ ಕೈಕೊಳ್ಳಲಾಗಿದೆ. ಬಾಕಿ ಉಳಿದ ೧೮೨೪೭ ಹೆಕ್ಟೇರ ಕ್ಷೇತ್ರದ ಅಂದಾಜು ಪತ್ರಿಕೆ ತಯಾರಿಸಲಾಗುತ್ತಿದೆ.

**ಅಥಣಿ ತಾಲೂಕಿನ ಸಣ್ಣ ನೀರಾವರಿ ಹಿನ್ನೆಲೆ**

- ಈ ವಿಭಾಗದಡಿಯಲ್ಲಿ ಬರುವ ಸಣ್ಣ ನೀರಾವರಿ ಯೋಜನೆ ಕಾಮಗಾರಿಗಳಿಗಾಗಿ ಇಲ್ಲಿಯವರೆಗೆ ಒಟ್ಟು ೧೧,೨೫೭.೦೬ ಹೆಕ್ಟೇರಗಳಷ್ಟು ನೀರಾವರಿಯನ್ನು ಹೊಂದಿದೆ.[೭]

---

೭ 'ಜಲ ಸಂಪನ್ಮೂಲ ಇಲಾಖೆ' – ಸಣ್ಣ ನೀರಾವರಿ ಉಪ ವಿಭಾಗ ಅಥಣಿ – ಪ್ರಗತಿ ವರದಿ. ೨೦೧೪-೧೫

- ೨೦೧೪-೧೫ ನೇ ಸಾಲಿನಲ್ಲಿ ಸಣ್ಣ ನೀರಾವರಿ ಯೋಜನೆಗಾಗಿ ಅಥಣಿ ತಾಲೂಕಿನಲ್ಲಿ ಬರುವ ಲೋಕುರ ಗ್ರಾಮದಲ್ಲಿ ಇರುವ ಏತ ನೀರಾವರಿ ಯೋಜನೆಯು ಜಾರಿಯಲ್ಲಿದೆ. ಒಂದು ಯೋಜನೆಯ ಒಟ್ಟು ರೂಪಾಯಿ ೧.೫ ಕೋಟಿ ಅನುದಾನವನ್ನು ಮಂಜೂರು ಮಾಡಿರುವದು ಇಂತಹ ನಾಲ್ಕು ಯೋಜನೆಗಳ ಜಾರಿಯಿದ್ದು ಇದರ ಒಟ್ಟು ಮೊತ್ತ ೬ ಕೋಟಿ ಮಂಜೂರು ಮಾಡರುತ್ತಾರೆ..
- ಕಾಗವಾಡದಲ್ಲಿ ನಡೆಯುತ್ತಿರುವ ಏತ ನೀರಾವರಿ ಕಾಮಗಾರಿಯು ಪ್ರಗತಿಯಲ್ಲಿದ್ದು. ಇದಕ್ಕೆ ಸುಮಾರು ೧೨೦ಲಕ್ಷ ರೂಪಾಯಿಗಳು ಖರ್ಚಾಗಿದ್ದು ಹಾಗೂ ಲೋಕುರನಲ್ಲಿ ನಡೆಯುತ್ತಿರುವ ಕಾಮಗಾರಿಗಳು ಪ್ರಗತಿಯಲ್ಲಿ ಅಲ್ಲಿ ಬರುವ ಕಾಮಗಾರಿ ರೈಲು ಹಳಿಯಿಂದ ಕಾಮಗಾರಿ ಸ್ಥಗಿತಗೊಂಡಿದೆ.
- ಅಥಣಿ ತಾಲೂಕಿನಲ್ಲಿ ಒಟ್ಟು ೧೧೨೫೭.೦೬ ಹೆಕ್ಟೇರ ಸಣ್ಣ ನೀರಾವರಿ ಇಲಾಖೆಯಿಂದ ನೀರಾವರಿ ಕ್ಷೇತ್ರವನ್ನಾಗಿ ನಿರ್ಮಿಸಲಾಗಿದೆ. ಬಾಕಿ ಉಳಿದ ಕೆಲವು ಪ್ರದೇಶವನ್ನು ಸರಕಾರದಿಂದ ಬಂದ ಹೊಸ ಯೋಜನೆ ಎಂದರೆ ಸೋಲಾರ್ ಯೋಜನೆಯಡಿಯಲ್ಲಿ ಉಳಿದ ಪ್ರದೇಶವನ್ನು ನೀರಾವರಿಯನ್ನಾಗಿ ಮಾಡುವ ಪ್ರಯತ್ನ ಇಲಾಖೆಯು ಈ ಸಾಲಿನಲ್ಲಿ ನಿರ್ಮಿಸುವ ಕಾರ್ಯ ಪ್ರಗತಿಯಲ್ಲಿದೆ?
- ೨೦೧೪ರ ಅಂತ್ಯದಲ್ಲಿ ೯೫,೨೩೪ ಹೆಕ್ಟೇರ್ ಕ್ಷೇತ್ರ ಪ್ರದೇಶ ನೀರಾವರಿಯಾಗಿದ್ದು. ಅದರಲ್ಲಿ ಕೆರೆಗಳಿಂದ ೭೦೦ ಹೆಕ್ಟೇರ್ ಪ್ರದೇಶ, ಕೊಳವೆ ಭಾವಿಗಳಿಂದ ೧೩,೩೧೦ ಹೆಕ್ಟೇರ್ ಪ್ರದೇಶ, ಬಾವಿಯಿಂದ ೨೭,೫೫೨ ಹೆಕ್ಟೇರ್ ಪ್ರದೇಶ, ಕಾಲುವೆಯಿಂದ ೨,೨೪೭ ಹೆಕ್ಟೇರ್ ಪ್ರದೇಶ, ಇತರೆ ಮೂಲಗಳಿಂದ ಬರುವ ನೀರಿನಿಂದ ೫೧.೪೨೫ ಹೆಕ್ಟೇರ್ ಪ್ರದೇಶ ನೀರಾವರಿಯನ್ನು ಹೊಂದಿದೆ.
- ೨೦೧೪-೧೫ ಸಾಲಿನ ವಿಶೇಷ ಘಟಕ ಯೋಜನೆ ಹಾಗೂ ಗಿರಿಜನ ಉಪ ಯೋಜನೆಯಡಿಯಲ್ಲಿ ಫಲಾನುಭವಿಗಳ ಹೆಸರು ಬಂದಿದ್ದು, ಇಲಾಖೆಯಿಂದ ಕಾಮಗಾರಿ ಯೋಜನೆಯ ಕಾರ್ಯ ಪಟ್ಟಿ ರಚಿಸಿ ಟೆಂಡರನ್ನು ಆಹ್ವಾನಿಸುವ ಪ್ರಕ್ರಿಯೆ ಚಾಲ್ತಿಯಲ್ಲಿದೆ.

**ಬ ಸಣ್ಣ ನೀರಾವರಿ ಯೋಜನೆಯ ಬೆಳವಣಿಗೆ ಹಿನ್ನೆಲೆ**

ಅಥಣಿ ತಾಲೂಕಿನಲ್ಲಿ ಬೀಳುವ ಮಳೆ ಅಸಮರ್ಪಕವೂ ಕಾಲಕಾಲಕ್ಕೆ ಮಳೆಯಾಗದೇಯಿರುವುದರಿಂದ ಅಥಣಿ ತಾಲೂಕು ಬರಗಾಲ ಪೀಡಿತ ಪ್ರದೇಶವಾಗಿದೆ. ಇಲ್ಲಿನ ರೈತರಿಗೂ ಮತ್ತು ಮಳೆಗೂ ಇರುವ ಜೂಜಾಟ ಎಂದು ಹೇಳಬಹುದು. ಹಿಗಾಗಿ ಕೆಲವು ರೈತರು ಸಾವಿಗೆ ಮೊರೆ ಹೋಗುವ ಪರಿಸ್ಥಿತಿ ನಿರ್ಮಾಣವಾಗತೊಡಗಿದೆ. ಇದನ್ನು ತಪ್ಪಿಸಲು ನಮ್ಮ ಸರಕಾರವು ಹಲವಾರು ಯೋಜನೆಗಳನ್ನು ರೂಪಿಸಿದರೂ. ಆ ಯೋಜನೆಗಳಲ್ಲಿ ಕೆಲವು

ಯೋಜನೆಗಳು ರೈತರ ಕೈಗಳಿಗೆ ಸೇರುತಿಲ್ಲ. ಇನ್ನೂ ಕೆಲವು ಯೋಜನೆಗಳು ಕೈ ಸೇರಿದರೂ ಸಂಪೂರ್ಣವಾಗಿ ಯಶಸ್ಸು ಕಾಣುವಲ್ಲಿ ವಿಫಲವಾಗಿವೆ. ಸರಕಾರ ಯೋಜನೆಗಳನ್ನು ರೂಪಿಸಿದರೂ ರೈತರು ಆ ಯೋಜನೆ ಬಳಕೆ ಮಾಡುವಲ್ಲಿ ವಿಫಲರಾಗಿದ್ದಾರೆ ಎಂದು ಹೇಳಬಹುದು.

ಸಣ್ಣ ನೀರಾವರಿಯು ಮುಖ್ಯವಾಗಿ ಕೆರೆಗಳು, ಬಾವಿಗಳು, ಕೊಳವೆ ಬಾವಿಗಳು, ಸಣ್ಣ ಅಣೆಕಟ್ಟುಗಳು, ಕಿಂಡಿ ಅಣೆಕಟ್ಟಡಗಳು, ಬಾಂದಾರುಗಳು, ಬ್ಯಾರೇಜ್‌ಗಳು, ಬಂದಾರು ಕಮ್ ಬ್ಯಾರೇಜ್‌ಗಳು ಹೀಗೆ ಮುಂತಾದ ಯೋಜನೆಯಗಳ ಮೂಲಕ ರೈತರಿಗೆ ತ್ವರಿತ ಸಮಯದಲ್ಲಿ ನೀರನ್ನು ಒದಗಿಸುವದು ಸಣ್ಣ ನೀರಾವರಿಯ ಇಲಾಖೆಯ ಮುಖ್ಯ ಧ್ಯೇಯವಾಗಿದೆ. ಪ್ರಮುಖ ಅನೂಕೂಲಗಳೆಂದರೆ: ಅವು ಕನಿಷ್ಠ ವೆಚ್ಚದಲ್ಲಿ ಹಾಗೂ ಅಲ್ಪಕಾಲದಲ್ಲಿ ಪೂರ್ಣಗೊಳಿಸಬಹುದು ಮತ್ತು ಉತ್ಪಾದಕತೆ ಹೆಚ್ಚಿಸಿ ಅದರ ಮೇಲಿನ ಪರಿಣಾಮವನ್ನು ಕೂಡಲೇ ಅನುಭವಿಸಬಹುದು.

ಭಾರತ ದೇಶದ, ಕರ್ನಾಟಕ ರಾಜ್ಯದ, ಬೆಳಗಾವಿ ಜಿಲ್ಲೆಯ, ಅಥಣಿ ತಾಲೂಕಿನ, ಒಟ್ಟು ಭೂ ಪ್ರದೇಶ ಇದರಲ್ಲಿ ನಗರ ಪ್ರದೇಶದ ಒಟ್ಟು ಭೂ ವಿಸ್ತೀರ್ಣ ಮತ್ತು ಗ್ರಾಮೀಣ ಪ್ರದೇಶದ ಒಟ್ಟು ಭೂ ವಿಸ್ತೀರ್ಣ ಹಾಗೂ ಅದರಲ್ಲಿ ವಾಸಿಸುತ್ತಿರುವ ಒಟ್ಟು ಜನ ಸಂಖ್ಯೆ ಮತ್ತು ಇದರಲ್ಲಿ ಬರುವ ನಗರ ಪ್ರದೇಶದ ಒಟ್ಟು ಜನ ಸಂಖ್ಯೆ ಹಾಗೂ ಗ್ರಾಮೀಣ ಪ್ರದೇಶದ ಒಟ್ಟು ಜನಸಂಖ್ಯೆ ಮತ್ತು ಅದರಲ್ಲಿ ವ್ಯವಸಾಯ ಮಾಡುತ್ತಿರುವ ಪುರುಷರ ಸಂಖ್ಯೆ ಹಾಗೂ ಮಹಿಳೆಯರ ಸಂಖ್ಯೆ ಮತ್ತು ಅಥಣಿ ತಾಲೂಕಿನಲ್ಲಿ ಬರುವ ವಲಯವಾರು ಗ್ರಾಮಗಳು ಈ ಗ್ರಾಮದಲ್ಲಿ ಇರುವ ಜನ ಸಂಖ್ಯೆಯನ್ನು ನಾವು ಇಲ್ಲಿ ತಿಳಿಯಬಹುದು. ಹಾಗೂ ಅಥಣಿ ತಾಲೂಕಿನಲ್ಲಿ ಬರುವ ನೀರಾವರಿ ಮೂಲಗಳಾದ ಕೆರೆ, ಬಾವಿ, ಕೊಳವೆ ಬಾವಿ, ಬಂದಾರು, ಬಂದಾರು ಕಮ್ ಬ್ಯಾರೇಜು ಇತ್ಯಾದಿಗಳನ್ನು ತಿಳಿಯುವುದು. ಅಥಣಿ ತಾಲೂಕಿನಲ್ಲಿ ಇರುವ ಜನ ಈ ನೀರಾವರಿಯ ಉಪಯೋಗಿಸಿ ಗ್ರಾಮದಲ್ಲಿ ಆಗಿರುವ ಬೆಳವಣಿಗೆ, ಅಭಿವೃದ್ಧಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಜೀವನ ಮಟ್ಟದಲ್ಲಿ ಬೆಳವಣಿಗೆ ಹೊಂದಿರುವ ಬಗ್ಗೆ ಮತ್ತು ಈ ಒಂದು ವ್ಯವಸ್ಥೆ ತಮ್ಮ ಬಂಡವಾಳದ್ದಾ, ಸರಕಾರದಿಂದ್ದಾ, ಅಥವಾ ಇತರೆ ಸಂಸ್ಥೆಯಿ ಇರುವ ಸಹಾಯದಿಂದ ಅಭಿವೃದ್ಧಿಗೆ ದಾಪುಗಾಲು ಹಾಕುತ್ತಿರುವ ಅಥಣಿ ತಾಲೂಕಿನ ಮಾಹಿತಿಯನ್ನು ಈ ಕೇಳಗಿನಂತೆ ನಾವು ತಿಳಿಯಬಹುದು.

## ೧. ಭೌಗೋಳಿಕ ಹಿನ್ನಲೆ.

ಬೆಳಗಾವಿ ಜಿಲ್ಲೆಯಲ್ಲಿ ಸುಮಾರು ೧೦ ತಾಲೂಕುಗಳಿದ್ದು ಅದರಲ್ಲೂ, ಅಥಣಿ ತಾಲೂಕು ದೊಡ್ಡ ತಾಲೂಕು ಎಂದು ಹೆಸರಾದ ಈ ತಾಲೂಕಿನಲ್ಲಿ ಸುಮಾರು ೪ ವಲಯಗಳು ಅದರಲ್ಲಿ ಒಟ್ಟು ೧೦೯ ಗ್ರಾಮಗಳು ಬರುತ್ತವೆ.[೮]

---

8. 'Census of India 2011' - Directorate of census Operations, Karnatak 2010-11 Villeges, Page No 30,31

**ಬೆಳಗಾವಿ ಜಿಲ್ಲೆಯ ತಾಲೂಕುಗಳು**

ಬೆಳಗಾವಿ ಜಿಲ್ಲೆಯ ಒಟ್ಟು ತಾಲೂಕುಗಳು ೧. ಅಥಣಿ, ೨. ರಾಯಬಾಗ, ೩. ಚಿಕ್ಕೊಡಿ, ೪. ಗೋಕಾಕ, ೫. ಹುಕ್ಕೇರಿ, ೬. ಬೆಳಗಾವಿ, ೭. ಖಾನಾಪೂರ, ೮. ಬೈಲಹೋಗಲ ೯. ರಾಮದುರ್ಗ, ೧೦. ಸವದತ್ತಿ.

**ಅಥಣಿ ತಾಲೂಕಿನಲ್ಲಿ ವಲಯಗಳು**

ಅಥಣಿ ತಾಲೂಕಿನಲ್ಲಿ ಬರುವ ಒಟ್ಟು ವಲಯಗಳು ೧ ಅನಂತಪೂರ, ೨. ಕಾಗವಾಡ, ೩. ಅಥಣಿ, ೪. ತೆಲಸಂಗ.

೧ **ಅನಂತಪೂರ ವಲಯದ ಗ್ರಾಮಗಳು** ಪಾಂಡೆಗಾಂವ, ಖಿಳೆಗಾಂವ, ಆಜೂರ, ಅನಂತಪೂರ, ಮಲಾಬಾದ, ಬೆವನೂರ, ತಾಂವಶಿ, ನಾಗನೂರ ಪಿ.ಎ, ಶಿರೂರ, ಸಂಬರಗಿ, ಅರಳಟ್ಟಿ, ಬಮ್ಮನಾಳ, ವಿಷ್ಣುವಾಡಿ, ಜಕ್ಕಾರಟ್ಟಿ, ಜಂಬಗಿ, ಕಲೂತಿ, ಕಿರಣಗಿ, ಬಾಳಿಗೇರಿ, ಗುಂಡೇವಾಡಿ, ಶಿವನೂರ, ಮದಭಾವಿ, ತೆವರಟ್ಟಿ, ಸಿದ್ದೇವಾಡಿ, ಹನಮಾಪುರ, ಅಗ್ರಾಣಿ ಇಂಗಳವಾಂವ, ಅಬ್ಬಿಹಾಳ, ಪಾರ್ಥನಹಳ್ಳಿ, ಮಾಯಿನಟ್ಟಿ, ಚಮಕೇರಿ, ಬೇಡರಟ್ಟಿ.

೨ **ತೆಲಸಂಗ ವಲಯದ ಗ್ರಾಮಗಳು** ರಾಮತೀರ್ಥ, ಕಕಮರಿ, ಕೊಟ್ಟಲಗಿ, ಬನ್ನೂರ, ತೆಲಸಂಗ, ಕನ್ನಾಳ, ಪಡತಾರವಾಡಿ, ಐಗಳಿ, ಕೋಹಳ್ಳಿ, ಕೆಸರದಡ್ಡಿ, ಅಡಹಳ್ಳಿ, ಅಡಳಟ್ಟಿ, ಯಲಿಹಡಲಗಿ, ಯಕ್ಕಂಚಿ, ಬಡಚಿ, ದೇಸಾರಟ್ಟಿ, ಖೋತನಟ್ಟಿ, ಅರಟಾಳ, ಹಾಲಳ್ಳಿ, ಬಾಡಗಿ, ಯಲ್ಲಮವಾಡಿ, ದಬದಬಹಟ್ಟಿ, ಕೊಕಟನೂರ, ಬುರ್ಲಟ್ಟಿ, ಕಟಗೇರಿ, ಕೊಡಗಾನೂರ, ನಂದಗಾಂವ, ಘಟನಟ್ಟಿ, ಬಳವಾಡ, ಶಿರಹಟ್ಟಿ, ಝುಂಜರವಾಡ, ಸುಟ್ಟಟ್ಟಿ.

೩ **ಕಾಗವಾಡ ವಲಯದ ಗ್ರಾಮಗಳು** ಮಂಗಾವತಿ, ಕಾಗವಾಡ, ಜೂಗುಳ, ಶಹಪೂರ, ಶಿರಗುಪ್ಪಿ, ಮೊಳವಾಡ, ಕುಸನಾಳ, ಉಗಾರ ಖುರ್ದ, ಉಗಾರ ಬದ್ರುಕ, ಪರೀದಖಾನವಾಡಿ, ಶೇಡಬಾಳ, ಲೋಕೂರ, ಮಂಗಸೂಳಿ, ಕೆಂಪವಾಡ, ನವಲಿಹಾಳ, ಕೌಲಗುಡ್ಡ, ಮೋಳೆ, ಕಾತ್ರಾಳ, ಐನಾಪೂರ, ಕೃಷ್ಣಾ ಕಿತ್ತೂರ, ಬಣಜವಾಡ.

೪ **ಅಥಣಿ ವಲಯದ ಗ್ರಾಮಗಳು**. ಮುರಗುಂಡಿ, ಮಸರಗುಪ್ಪಿ, ದೇವರಡ್ಡೇರಟ್ಟಿ, ಅಥಣಿ ಗ್ರಾಮೀಣ, ತಂಗಡಿ, ಶಿನಾಳ, ಸಂಕೊನಟ್ಟಿ, ಹುಲಗಬಾಳಿ, ನದಿ ಇಂಗಳಗಾಂವ, ತೀರ್ಥ, ಸಪ್ತ ಸಾಗರ, ಚಿಕ್ಕೂಡ, ದರೂರ, ಹಲ್ಯಾಳ, ಅವರಖೋಡ, ನಾಗನೂರ ಪಿ ಕೆ, ಖವಟಗೋಪ್ಪ, ಶಂಕರಹಟ್ಟಿ, ಶೇಗುಣಸಿ, ದೊಡವಾಡ, ಸತ್ತಿ, ರಡ್ಡೆರಹಟ್ಟಿ, ನಂದೇಶ್ವರ, ಮಹೇಶವಾಡಗಿ, ಝುಂಜರವಾಡ, ಸವದಿ.


KARNATAKA
Districts
N
MAHARASHTRA
ANDHRA PRADESH
TAMILNADU
KERALA
ARABIAN SEA
Lakshadweep Sea
BIDAR
GULBARGA
BIJAPUR
BAGALKOT
BELGAUM
RAICHUR
KOPPAL
GADAG
DHARWAD
UTTAR KANNAD
HAVERI
BELLARY
DAVANGERE
CHITRADURGA
SHIMOGA
UDUPI
CHIKMAGALUR
TUMKUR
KOLAR
HASSAN
DAKSHIN KANNAD
BANGALORE
MANDYA
KODAGU
MYSORE
CHAMRAJNAGAR
State Boundary
District Boundary
National Highway with Numbers
Other Road
Rail Line
River and Lake
State Capital
District Headquarter
Major Town
Airport
Map not to Scale
Copyright © 2009 www.mapsofindia.com


Belgaum
(Karnataka)
N
To Shirol
To Kagal
Maharashtra
Bagalkot
Dharwad
Map not to Scale
District Boundary
River
National Highway
Major Road
Road
Railway Track
District Headquarter
Taluk Headquarter
Town
Tourist Place
Kakmori
Aigali
Telsang
Athni
Navalihal
Badachi
Yellammanawadi
Shedbal
Ainapur
Ugar Khurd
Kudchi
Krishna
Balawad
Shirguppi
Kongnolli
Bhoj
Sadalgi
Chinchali
Ebaratti
Satti
Raybag
Saundalga
Akkol
Chikodi
Nipani
Byakud
Chikodi Rd
Gurlapur
Kanagle
Bagewdi
Mudalgi
Kuligod
Sankeshwar
Hukeri
Gokak Rd
Konnur
Yadawad
Thanahattargi
Yemkanmardi
Gokak
Pachhapur
Salhalli
Sutkatti
Kasba Chandragi
Ankalgi
Katkol
Kakati
Vannur
Yargatti
Tergal
Ramdurg
Malprabha
Nesargi
Murgod
Sambre
Belgaum
Bail Hongal
Manoli
Manihal
Peeramawadi
Sampgaon
Saundatti
Bagewadi
Malprabha
Malprabha
Dodvad
Jamboti
Khanapur
Bidi
Shiroli
Nandgad
Kittur
4
Halashi
To Monigatti
To Moleri
4A
Londa
Tavargatti
Nagargali
To Castle Rock
To Alnavar
Copyright (C) Compare Infobase Pvt. Ltd. 2000-2001

GRAMPANCHAYT MAP OF ATHANI TALUKA




DISTRICT "NRDMS" CENTER ZP, BELGAUM

## ೧ ಭೂ ಪ್ರದೇಶ

**ಭಾರತ** – ಭಾರತವು ಒಂದು ಬೃಹತ್ ರಾಷ್ಟ್ರವಾಗಿದೆ. ಅದರ ಒಟ್ಟು ವಿಸ್ತೀರ್ಣವು ೩೨,೮೭,೨೬೩ ಚದರ ಕಿಲೋ ಮೀಟರಾಗಿದೆ. ಅದು ದಕ್ಷಿಣೋತ್ತರವಾಗಿ ೩,೨೧೪ ಕಿಲೋ ಮೀಟರ್ ಮತ್ತು ಪೂರ್ವ ಪಶ್ಚಿಮವಾಗಿ ೨,೯೩೩ ಕಿಲೋ ಮೀಟರ್ ಉದ್ದಗಲ ಹೊಂದಿದೆ.

**ಕರ್ನಾಟಕ** – ನಮ್ಮ ರಾಜ್ಯದ ಒಟ್ಟು ಭೌಗೋಳಿಕ ವಿಸ್ತೀರ್ಣವು ೧,೯೧,೭೯೧.೦೦ ಚದರ ಕಿಲೋ ಮೀಟರ್ ಹೊಂದ್ದಿದು ಅದರಲ್ಲಿ ೬,೦೧೪.೪೩ ಚದರ ಕಿಲೋ ಮೀಟರ ನಗರ ಪ್ರದೇಶಕ್ಕೆ ಸಿಮೀತವಾಗಿದೆ. ಹಾಗೂ ೧,೮೫,೭೭೬.೫೭ ಚದರ ಕಿಲೋ ಮೀಟರ್ ಪ್ರದೇಶವು ಗ್ರಾಮೀಣ ಭಾಗ ಹೊಂದಿದೆ.

**ಬೆಳಗಾವಿ** – ಕರ್ನಾಟಕ ರಾಜ್ಯದ ಬೆಳಗಾವಿ ಜಿಲ್ಲೆಯ ಒಟ್ಟು ಭೌಗೋಳಿಕ ವಿಸ್ತಿರ್ಣವು ೧೩,೪೩೩.೦೦ ಚದರ ಕಿಲೋ ಮೀಟರ್ ಹೊಂದಿದ್ದು ಅದರಲ್ಲಿ ೪೧೮.೪೯ ಚಂದರ ಕಿಲೋ ಮೀಟರ್ ನಗರ ಪ್ರದೇಶಕ್ಕೆ ಸಿಮೀತವಾಗಿದೆ ಹಾಗೂ ೧೩,೪೩೩.೦೦ ಚದರ ಕಿಲೋ ಮೀಟರ್ ಪ್ರದೇಶವು ಗ್ರಾಮೀಣ ಭಾಗ ಹೊಂದಿದೆ.

**ಅಥಣಿ** – ಕರ್ನಾಟಕ ರಾಜ್ಯದ ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ಒಟ್ಟು ಭೌಗೋಳಿಕ ವಿಸ್ತಿರ್ಣವು ೧,೯೯೧.೦೦ ಚದರ ಕಿಲೋ ಮೀಟರ್ ಹೊಂದಿದ್ದು ಅದರಲ್ಲಿ ೯.೦೯ ಚಂದರ ಕಿಲೋ ಮೀಟರ್ ನಗರ ಪ್ರದೇಶಕ್ಕೆ ಸಿಮೀತವಾಗಿದೆ ಹಾಗೂ ೧೯೮೧.೯೧ ಚದರ ಕಿಲೋ ಮೀಟರ್ ಪ್ರದೇಶವು ಗ್ರಾಮೀಣ ಭಾಗ ಹೊಂದಿದೆ.[9]

## ೨. ಜನಸಂಖ್ಯೆ

**ಕರ್ನಾಟಕ–** ನಮ್ಮ ರಾಜ್ಯದ ಒಟ್ಟು ಜನಸಂಖ್ಯೆಯು ೬,೧೦,೯೫,೨೯೭ ಹೊಂದ್ದಿದು ಅದರಲ್ಲಿ ಒಟ್ಟು ಪುರುಷರ ಸಂಖ್ಯೆಯು ೩,೦೯,೬೬,೬೫೭ ರಷ್ಟು ಹಾಗೂ ಒಟ್ಟು ಮಹಿಳೆಯರ ಸಂಖ್ಯೆಯ ೩,೦೧,೨೮,೬೪೦ ರಷ್ಟು ಜನರು ಕರ್ನಾಟಕದಲ್ಲಿ ವಾಸವಾಗಿದ್ದಾರೆ ಅದರಲ್ಲಿ ಕರ್ನಾಟಕದ ರಾಜ್ಯದ ನಗರ ಪ್ರದೇಶದ ಒಟ್ಟು ಜನಸಂಖ್ಯೆಯು ೨,೩೬,೨೫,೯೬೨ ಹೊಂದ್ದಿದು ಅದರಲ್ಲಿ ಒಟ್ಟು ಪುರುಷರ ಸಂಖ್ಯೆಯು ೧,೨೦,೩೭,೩೦೩ ರಷ್ಟು ಹಾಗೂ ಒಟ್ಟು ಮಹಿಳೆಯರ ಸಂಖ್ಯೆಯ ೧,೧೫,೮೮,೬೫೯ ರಷ್ಟು ಜನ ವಾಸವಾಗಿದ್ದಾರೆ. ಹಾಗೂ ಕರ್ನಾಟಕ ರಾಜ್ಯದಲ್ಲಿ ಗ್ರಾಮೀಣ ಪ್ರದೇಶದ ಒಟ್ಟು ಜನಸಂಖ್ಯೆಯು ೩,೭೪,೬೯,೩೩೫ ಹೊಂದ್ದಿದು ಅದರಲ್ಲಿ ಒಟ್ಟು ಪುರುಷರ ಸಂಖ್ಯೆಯು ೧,೮೯,೨೯,೩೫೪ ರಷ್ಟು ಹಾಗೂ ಒಟ್ಟು ಮಹಿಳೆಯರ ಸಂಖ್ಯೆಯ ೧,೮೫,೩೯,೮೮೧ ರಷ್ಟು ಜನರು ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಾ ತಮ್ಮ ಜೀವನ ಕಳೆಯುತಿದ್ದಾರೆ.

9. 'Census of India 2011' - Directorate of census Operations, Karnatak Important Statistics 2011, Page No 09,10

**ಬೆಳಗಾವಿ** – ಕರ್ನಾಟಕ ರಾಜ್ಯದ ಬೆಳಗಾವಿ ಜಿಲ್ಲೆಯ ಒಟ್ಟು ಜನಸಂಖ್ಯೆಯು ೪೭,೭೯,೬೬೧ ಹೊಂದ್ದಿದು ಅದರಲ್ಲಿ ಒಟ್ಟು ಪುರುಷರ ಸಂಖ್ಯೆಯು ೨೪,೨೩,೦೬೩ ರಷ್ಟು ಹಾಗೂ ಒಟ್ಟು ಮಹಿಳೆಯರ ಸಂಖ್ಯೆಯ ೨೩,೫೬,೫೯೮ ರಷ್ಟು ಜನರು ಬೆಳಗಾವಿ ಜಿಲ್ಲೆಯಲ್ಲಿ ವಾಸವಾಗಿದ್ದಾರೆ. ಬೆಳಗಾವಿ ಜಿಲ್ಲೆಯ ನಗರ ಪ್ರದೇಶದ ಒಟ್ಟು ಜನಸಂಖ್ಯೆಯು ೧೨,೧೧,೧೯೫ ಹೊಂದ್ದಿದು ಅದರಲ್ಲಿ ಒಟ್ಟು ಪುರುಷರ ಸಂಖ್ಯೆಯು ೬,೧೧,೯೬೯ ರಷ್ಟು ಹಾಗೂ ಒಟ್ಟು ಮಹಿಳೆಯರ ಸಂಖ್ಯೆಯ ೫,೯೯,೨೨೬ ರಷ್ಟು ಜನ ವಾಸವಾಗಿದ್ದಾರೆ. ಬೆಳಗಾವಿ ಜಿಲ್ಲೆಯ ಗ್ರಾಮೀಣ ಪ್ರದೇಶದ ಒಟ್ಟು ಜನಸಂಖ್ಯೆಯು ೩೫,೬೮,೪೬೬ ಹೊಂದ್ದಿದು ಅದರಲ್ಲಿ ಒಟ್ಟು ಪುರುಷರ ಸಂಖ್ಯೆಯು ೧೮,೧೧,೦೯೪ ರಷ್ಟು ಹಾಗೂ ಒಟ್ಟು ಮಹಿಳೆಯರ ಸಂಖ್ಯೆಯ ೧೭,೫೭,೩೭೨ ರಷ್ಟು ಜನರು ಬೆಳಗಾವಿ ಜಿಲ್ಲೆಯ ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಾ ಇದ್ದಾರೆ.

**ಅಥಣಿ** – ಕರ್ನಾಟಕ ರಾಜ್ಯದ ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ಒಟ್ಟು ಜನಸಂಖ್ಯೆಯು ೫,೨೫,೮೩೨ ಹೊಂದ್ದಿದು ಅದರಲ್ಲಿ ಒಟ್ಟು ಪುರುಷರ ಸಂಖ್ಯೆಯು ೨,೬೮,೫೭೯ ರಷ್ಟು ಹಾಗೂ ಒಟ್ಟು ಮಹಿಳೆಯರ ಸಂಖ್ಯೆಯ ೨,೫೭,೨೫೩ ರಷ್ಟು ಜನರು ವಾಸವಾಗಿದ್ದಾರೆ. ಅದರಲ್ಲಿ ಅಥಣಿ ತಾಲೂಕಿನ ನಗರ ಪ್ರದೇಶದ ಒಟ್ಟು ಜನಸಂಖ್ಯೆಯು ೪೭,೮೪೨ ಹೊಂದ್ದಿದು ಅದರಲ್ಲಿ ಒಟ್ಟು ಪುರುಷರ ಸಂಖ್ಯೆಯು ೨೪,೦೪೬ ರಷ್ಟು ಹಾಗೂ ಒಟ್ಟು ಮಹಿಳೆಯರ ಸಂಖ್ಯೆಯ ೨೩,೭೯೬ ರಷ್ಟು ಜನ ವಾಸವಾಗಿದ್ದಾರೆ ಹಾಗೂ ಅಥಣಿ ತಾಲೂಕಿನ ಗ್ರಾಮೀಣ ಪ್ರದೇಶದ ಒಟ್ಟು ಜನಸಂಖ್ಯೆಯು ೪,೭೭,೯೯೦ ಹೊಂದ್ದಿದು ಅದರಲ್ಲಿ ಒಟ್ಟು ಪುರುಷರ ಸಂಖ್ಯೆಯು ೨,೪೪,೫೩೩ ರಷ್ಟು ಹಾಗೂ ಒಟ್ಟು ಮಹಿಳೆಯರ ಸಂಖ್ಯೆಯ ೨,೩೩,೪೫೭ ರಷ್ಟು ಜನರು ಅಥಣಿ ತಾಲೂಕಿನ ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಾ ಇದ್ದಾರೆ. ಗ್ರಾಮವಾರು ಜನಸಂಖ್ಯೆಯನ್ನು ಅನುಬಂಧದಲ್ಲಿ ನೀಡಲಾಗಿದೆ.[೧೦]

### ೩. ಸಾಗುವಳಿ ಜನಸಂಖ್ಯೆ

**ಕರ್ನಾಟಕ** – ಕರ್ನಾಟಕ ರಾಜ್ಯದಲ್ಲಿ ಸಾಗುವಳಿ ಮಾಡುತ್ತಿರುವ ಜನರ ಸಂಖ್ಯೆಯು ೬೫,೮೦,೬೪೯ ರಷ್ಟು ಅದರಲ್ಲಿ ಒಟ್ಟು ಸಾಗುವಳಿ ಮಾಡುತ್ತಿರುವ ಪುರುಷರ ಸಂಖ್ಯೆ ೪೭,೫೩,೭೦೮ರಷ್ಟು ಜನರು ಹಾಗೂ ಸಾಗುವಳಿ ಮಾಡುತ್ತಿರುವ ಒಟ್ಟು ಮಹಿಳೆಯರ ಸಂಖ್ಯೆ ೧೮,೨೬,೯೪೧ರಷ್ಟು ಮಹಿಳೆಯರು ಸಾಗುವಳಿ ಮಾಡುತ್ತಾ ತಮ್ಮ ಜೀವನ ನಡೆಸಿಕೊಂಡು ಹೋಗುತ್ತಿದ್ದಾರೆ.

**ಬೆಳಗಾವಿ** – ಕರ್ನಾಟಕ ರಾಜ್ಯದ ಬೆಳಗಾವಿ ಜಿಲ್ಲೆಯ ಸಾಗುವಳಿ ಜನರ ಸಂಖ್ಯೆಯು ೭,೧೧,೯೮೦ರಷ್ಟು ಅದರಲ್ಲಿ ಒಟ್ಟು ಸಾಗುವಳಿ ಮಾಡುತ್ತಿರುವ ಪುರುಷರ ಸಂಖ್ಯೆ ೫,೦೯,೧೮೪

10. 'Census of India 2011' - Directorate of census Operations, Karnatak Important Statistics 2011, Page No 09,10

ರಷ್ಟು ಜನರು ಹಾಗೂ ಸಾಗುವಳಿ ಮಾಡುತ್ತಿರುವ ಒಟ್ಟು ಮಹಿಳೆಯರ ಸಂಖ್ಯೆ ೨,೦೨,೬೯ ರಷ್ಟು ಮಹಿಳೆಯರು ಸಾಗುವಳಿ ಮಾಡುತ್ತಾ ತಮ್ಮ ಜೀವನ ನಡೇಸಿಕೊಂಡು ಹೋಗುತ್ತಿದ್ದಾರೆ.

**ಅಥಣಿ** – ಕರ್ನಾಟಕ ರಾಜ್ಯದ ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ಸಾಗುವಳಿ ಜನರ ಸಂಖ್ಯೆಯು ೧,೧೦,೨೭೭ ರಷ್ಟು ಅದರಲ್ಲಿ ಒಟ್ಟು ಸಾಗುವಳಿ ಮಾಡುತ್ತಿರುವ ಪುರುಷರ ಸಂಖ್ಯೆ ೭೭,೮೦೧ ರಷ್ಟು ಜನರು ಹಾಗೂ ಸಾಗುವಳಿ ಮಾಡುತ್ತಿರುವ ಒಟ್ಟು ಮಹಿಳೆಯರ ಸಂಖ್ಯೆ ೩೨,೪೭೬ ರಷ್ಟು ಮಹಿಳೆಯರು ಸಾಗುವಳಿ ಮಾಡುತ್ತಾ ತಮ್ಮ ಜೀವನ ನಡೇಸಿಕೊಂಡು ಹೋಗುತ್ತಿದ್ದಾರೆ.

**೩. ಅಥಣಿ ತಾಲೂಕಿನ ನೀರಾವರಿಯ ಮೂಲಗಳು**

ನೀರಿನ ಪ್ರಮುಖ ಮೂಲಗಳನ್ನು ಎರಡು ಗುಂಪುಗಳಲ್ಲಿ ವಿಂಗಡಿಸಬಹುದು. ಅವುಗಳೆಂದರೆ ೧. ಮೇಲ್ಮೈ ಜಲ, ೨. ಅಂತರ್ಜಲ

೧. **ಮೇಲ್ಮೈ ಜಲ** – ಮೇಲ್ಮೈ ಜಲವು ಭೂಮಿಯ ಮೇಲುಗಡೆ ಕಂಡು ಬರುತ್ತದೆ. ಇದು ನದಿಗಳು, ಕೆರೆಗಳು, ಕೊಳಗಳು, ಕಾಲುವೆಗಳು, ಇತ್ಯಾದಿಗಳಿಂದ ದೊರಕುತ್ತದೆ. ಮೇಲ್ಮೈ ಜಲ ಮೂಲಗಳು ಮಳೆಯಿಂದ ಜಲವೃದ್ಧಿಗೊಳ್ಳುತ್ತವೆ. ಭಾರತದಲ್ಲಿ ವಾರ್ಷಿಕ ೬೯೦ ಬಿಲಿಯನ್ ಕ್ಯೂಬಿಕ್ ಮೀಟರುಗಳಿಗಿಂತಲೂ ಅಧಿಕ ಮೇಲ್ಮೈ ಜಲ ಲಭ್ಯವಿದೆಯೆಂದು ಅಂದಾಜು ಮಾಡಲಾಗಿದೆ. ಈ ನೀರಿನಲ್ಲಿ ಶೇಕಡ ೩೩ ಭಾಗ ಅವಿಯಾಗುತ್ತದೆ ಮತ್ತು ಶೇಕಡ ೨೨ ಭಾಗ ಮಣ್ಣಿಬಲ್ಲಿ ಇಂಗಿ ಹೋಗುತ್ತದೆ. ಮೇಲ್ಮೈ ಜಲವನ್ನು ಕಾಲುವೆಗಳ ಮೂಲಕ ಕೃಷಿಗೆ ಬಳಸಿಕೊಳ್ಳಲಾಗುತ್ತದೆ.[೧೧]

೨. **ಅಂತರ್ಜಲ** – ಅಂತರ್ಜಲವು ಭೂಮಿಯ ಮೇಲ್ಮೈಯಿಂದ ಕೆಳಭಾಗದಲ್ಲಿ ದೊರಕುತ್ತದೆ. ಇದು ಭೂಗರ್ಭದಲ್ಲಿ ಲಭ್ಯವಿರುವ ನೀರಾಗಿದೆ. ಇದು ಬಾವಿ, ಕೊಳವೆ ಬಾವಿ, ಮತ್ತು ಚಿಲುಮೆಗಳ (ಕಾರಂಜಿ) ರೂಪದಲ್ಲಿ ಲಭ್ಯವಿರುತ್ತದೆ. ಭಾರತದ ಭೂಗರ್ಭದಲ್ಲಿ ಜಲ ಸಂಪನ್ಮೂಲ ೪೩೩ ಬಿಲಿಯನ್ ಕ್ಯೂಬಿಕ್ ಮೀಟರ್‌ನಷ್ಟು ಲಭ್ಯವಿದೆ. ಆದರೆ ಇದುವರೆಗೆ ಕೇವಲ ಶೇಕಡ ೨೦ ರಷ್ಟು ಅಂತರ್ಜಲವನ್ನು ಮಾತ್ರ ನೀರಾವರಿಗೆ ಬಳಸಿಕೊಳ್ಳಲಾಗಿದೆ.

೩. **ನೀರಾವರಿಯ ಮೂಲಗಳು.** : ಬಾವಿ, ಕೊಳವೆ ಬಾವಿ, ಬಾಂದಾರು, ಬಾಂದಾರ ಕಮ್ ಬ್ಯಾರೇಜ್, ಕೆರೆ ನೀರಾವರಿ, ಕಾಲುವೆ ನೀರಾವರಿ, ನದಿಗಳು, ಏತ ನೀರಾವರಿ, ಹೀಗೆ ಇತ್ಯಾದಿ ಮೂಲಗಳಿಂದ ನಾವು ನೀರನ್ನ ಪಡೆಯುತ್ತೇವೆ.

ಅಥಣಿ ತಾಲೂಕಿನಲ್ಲಿ ಬರುವ ೧೦೯ ಗ್ರಾಮಗಳಿಗೆ ತಾಲೂಕಿನ ಅನೇಕ ಭಾಗಗಳಲ್ಲಿ ಸಣ್ಣ ನೀರಾವರಿ ಇಲಾಖೆಯ ಕೇಂದ್ರ ಸರಕಾರ ಮತ್ತು ರಾಜ್ಯ ಸರಕಾರ ಅನುಮೋದಿಸಿದ ಹೊಸ

---

೧೧. 'ಭಾರತದ ಆರ್ಥಿಕ ಅಭಿವೃದ್ಧಿ' – ಎಚ್ಚಾರ್ಕೆ. ಪ್ರಕಾಶನ ಸಪ್ನಾ ಬುಕ್ಕ ಹೌಸ್ – ೨೦೧೧. ಪುಟ ಸಂಖ್ಯೆ – ೧೮೦

ಯೋಜನೆಯ ಮೂಲಕ ಮಾಡಿರುವ ಸಾಧನೆಯು ಅತಿ ಗನ್ನನಿಯವಾದದ್ದು ಹಲವಾರು ಯೋಜನೆಗಳ ಮೂಲಕ ಅಥಣಿ ತಾಲೂಕಿನಲ್ಲಿ ರೂಪುಗೊಂಡ ಕೆರೆಗಳು, ಜಿನಗು ಕೆರೆಗಳು, ಎತ ನೀರಾವರಿ ಯೋಜನೆಗಳು, ಬಾಂದಾರ ಬ್ಯಾರೆಜ್ ಬಿಸಿಬಿಗಳು ಕಿಂಡಿ ಆಣೆಕಟ್ಟು/ಎಸ್‌ಡಬ್ಲ್ಯೂಇಡಿ ಮಾಹಿತಿ ಈ ಅಧ್ಯಯನದ ಅನುಬಂಧದಲ್ಲಿ ನೀಡಲಾಗಿದೆ.

### ೩ ಗ್ರಾಮೀಣ ಪ್ರದೇಶದಲ್ಲಿ ಸಣ್ಣ ನೀರಾವರಿಯ ಪಾತ್ರ

ಭಾರತವು ವಿಶ್ವದಲ್ಲೇ ಅತೀ ದೊಡ್ಡದಾದ ಜಲಾನಯನ ಅಭಿವೃದ್ಧಿ ಕಾರ್ಯಕ್ರಮಗಳು ಮತ್ತು ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ. ಗ್ರಾಮೀಣ ಅಭಿವೃದ್ಧಿಯಲ್ಲಿ ಜಲಾನಯನವನ್ನು ಒಂದು ಪ್ರಮುಖ ಹಾಗೂ ಭಿನ್ನವಾದ ಅಭಿವೃದ್ಧಿಯ ಘಟಕ ಎಂದು ಗುರುತಿಸಲಾಗಿದೆ. ಈ ಗ್ರಾಮೀಣ ಅಭಿವೃದ್ಧಿ ಘಟಕದಿಂದ ಗ್ರಾಮೀಣದಲ್ಲಿ ಬರುವ ಜನರ ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಹಾಗೂ ಅವರ ಜೀವನ ಮಟ್ಟದಲ್ಲಿ ಆದ ಬಲದಾವಣೆಗಳು ಮತ್ತು ರೈತರಲ್ಲಿ ಇರುವ ಒಂದು ಒಂಗ್ಗಟ್ಟು ಅವರ ಜೀವಣಕ್ಕೆ ದಾರಿ ದೀಪವಾಗಿ ಇರುವ ಗುಂಪಿಗೆ ಒಂದು ಉದಾರಣೆ ಎಂದರೆ ನೀರು ಬಳಕೆದಾರರ ಸಂಘ, ಅದರ ಉದ್ದೇಶಗಳು ಈ ಕೆಳಗಿನಂತೆ ನಾವು ತಿಳಿಯಬಹುದು.

**ಆರ್ಥಿಕವಾಗಿ :–** ಅಥಣಿ ತಾಲೂಕಿನ ಸಾಮಾನ್ಯ ಜನರು ನೀರಾವರಿಯನ್ನು ಬಳಸುತ್ತಾ ತಮ್ಮ ಜೀವನದಲ್ಲಿ ಬರುವ ಎಲ್ಲಾ ತೋಂದರೆಗಳನ್ನು ದೂರ ಮಾಡುತ್ತಾ ಬಂದಿದ್ದಾರೆ ಸಣ್ಣ ನೀರಾವರಿಯ ಯೋಜನೆಗಳನ್ನು ಬಳಸುವ ಮುಂಚೆ ತಮ್ಮ ಒಂದು ಹೋತ್ತಿನ ಊಟಕ್ಕು ಗತ್ತಿ ಇಲ್ಲದೆ ಇರುವ ಸಮಯಗಳು ಅವರಿಗೆ ಬಂದಿದ್ದವು ಅದರಲ್ಲಿ ಸರಕಾರದಿಂದ ದೋರೆಯುವ ಸೌಲಭ್ಯಗಳನ್ನು ಪಡೆದುಕೊಂಡು ತಮ್ಮ ಭೂಮಿಯಲ್ಲಿ ಇರುವ ನೀರಿನ ಪ್ರಮಾಣ ನೋಡಿ ಅದರಲ್ಲಿ ಬಾವಿ, ಅಥವಾ ಕೊಳವೆ ಬಾವಿ, ಆದುಣಿಕವಾಗಿ ದೋರೆರುವ ಪ್ಲಾಸ್ಟಿಕ ತಾಡಪಾಡಗಳನ್ನು ಬಳೆಸಿ ನೀರನ್ನು ಸಂಗ್ರಹಿಸಿ. ತಮ್ಮ ಭೂಮಿಯಲ್ಲಿ ಚಿಕ್ಕ ಸಾಗುವಳಿ ಮಾಡಿ ಅದರಲ್ಲಿ ತರಕಾರಿ, ಹಣ್ಣು, ಹಂಪಲುಗಳನ್ನು ಬೆಳೆಯುತ್ತಾ. ಅಥಣಿ ತಾಲೂಕಿನಲ್ಲಿ ಹಲವಾರು ಜನ ಆರ್ಥಿಕವಾಗಿ ಪ್ರಭಲರಾಗಿದ್ದಾರೆ ಎಂದು ಹೆಳಬಹುದು.

**ಸಾಮಾಜಿಕವಾಗಿ:–** ಅಥಣಿ ತಾಲೂಕಿನ ಗ್ರಾಮಾಂತರ ಪ್ರದೇಶಗಳಲ್ಲಿ ಸರಕಾರಿ ಯೋಜನೆಗಳ ಮೂಲಕ ನೀರಾವರಿ ಸೌಲಭ್ಯ ಹೆಚ್ಚುತ್ತಿರುವದರಿಂದ ಗ್ರಾಮಾಂತರ ಪ್ರದೇಶದ ವಿವಿಧ ಬೆಳೆಗಳನ್ನು ಬೆಳೆಯುವ ಜೊತೆಗೆ ಜನರಿಗೆ ವಿವಿಧ ಉದ್ಯೋಗ ಅವಕಾಶಗಳು ಹೇರಳವಾಗಿ ಲಭ್ಯವಾಗುತ್ತಿವೆ. ನೀರಾವರಿ ಕೆಲಸ ಕಾರ್ಯಗಳನ್ನು ಅನುಸರಿಸಿ ನೂರಾರು ಜನರು ಬದುಕು ಕಟ್ಟಿಕೊಂಡಿದ್ದಾರೆ. ನೀರಾವರಿಯಿಂದ ತರಕಾರಿ ಬೆಳೆಯುವುದು, ತೋಟಗಾರಿಕೆ. ದನ–ಕರುಗಳ ಸಾಕಾಣಿಕೆ, ರೇಷ್ಮೇ ತಯಾರಿಕೆ, ಹೈನುಗಾರಿಕೆ, ಕುರಿ, ಕೋಣ, ಎಮ್ಮೆ ಸಾಕಾಣಿಕೆ ಮಾಡುತ್ತಿದ್ದಾರೆ. ಇದರಿಂದ ಅವರಿಗೆ ಉತ್ತಮ ಆದಾಯ ಬರುತ್ತಿದ್ದು. ಸಾಮಾಜಿಕವಾಗಿ ಉತ್ತಮ ಸ್ಥಿತಿಗತಿಗಳನ್ನು

ಹೊಂದಿದ್ದಾರೆ. ಅಂದರೆ ಸುಸಜ್ಜಿತವಾದ ಮನೆ, ಉತ್ತಮವಾದ ಕುಡಿಯುವ ನೀರು, ಉಡುಪು, ಮನೆಗೆ ಬೇಕಾದ ಅತ್ಯುತ್ತಮ ಉಪಕರಣಗಳನ್ನು ಹೊಂದುವಲ್ಲಿ ಯಶಿಸ್ವಿಯಾಗಿದ್ದಾರೆ.

**ಶೈಕ್ಷಣಿಕವಾಗಿ :-** ಅಥಣಿ ತಾಲೂಕಿನ ಜನರು ಇತ್ತಿಚಿನ ದಿನಗಳಲ್ಲಿ ಹೆಚ್ಚು ಹೆಚ್ಚು ನೀರಾವರಿ ಸೌಲಭ್ಯಗಳನ್ನು ವಿವಿಧ ಮೂಲಗಳಿಂದ ಹೊಂದುತ್ತಿದ್ದು. ಉತ್ತಮ ಬೆಳೆಗಳನ್ನು ಬೆಳೆಯುತ್ತಿದ್ದಾರೆ. ತನ್ಮೂಲಕವಾಗಿ ಅವರ ಆದಾಯವು ಸಹ ದಿನದಿಂದ ದಿನಕ್ಕೆ ಹೆಚ್ಚುತ್ತಿದೆ. ಕಾರಣ ರೈತರು ಸಹ ತಮ್ಮ ಮಕ್ಕಳಿಗೆ ಅನೇಕ ಪ್ರಕಾರದ ಉನ್ನತ ಶಿಕ್ಷಣವನ್ನು ಕೊಡಿಸುವಲ್ಲಿ ಸಫಲರಾಗಿದ್ದಾರೆ. ಇದರಿಂದ ಮಕ್ಕಳು ಸಹ ಅತ್ಯಂತ ಉನ್ನತ ವಿದ್ಯಾಭ್ಯಾಸ ಪಡೆದು ವಿವಿಧ ಉದ್ಯೋಗಗಳಲ್ಲಿ ಸೇರಿಕೊಂಡಿದ್ದಾರೆ. ಉತ್ತಮ ಆದಾಯ ಪಡೆದು ಗುಣ ಮಟ್ಟದ ಜೀವನ ಮಟ್ಟವನ್ನು ಹೊಂದುತ್ತಿದ್ದಾರೆ. ಹೀಗೆ ನೀರಾವರಿ ಸಹ ತಾಲೂಕಿನ ಶೈಕ್ಷಣಿಕ ಅಭಿವೃದ್ಧಿಯನ್ನು ಹೆಚ್ಚಿಸುವಲ್ಲಿ ಸಹಕಾರಿಯಾಗಿದೆ.

**ಜೀವನ ಮಟ್ಟದಲ್ಲಿ ಬದಲಾವಣೆ** : ಅಥಣಿ ತಾಲೂಕಿನಲ್ಲಿ ಬರುವ ಜನರು ಅತಿಕಡು ಬಡತನದಿಂದ ಕೂಡಿದ ಮನೆತನಗಳನ್ನು ನಾವು ಇಲ್ಲಿ ನೋಡಬಹುದ್ದಾಗಿದೆ. ಆದರಲ್ಲಿ ನೀರಾವರಿ ಬಳಕೆ ಪೂರ್ವದಲ್ಲಿ ಇರುವ ರೈತರ ಸ್ಥಿತಿ ಅತೀ ಕೆಳ ಮಟ್ಟದಾಗಿತ್ತು. ಎಂದು ತಿಳಿಯ ಬಹುದು ಆದರೆ ಗ್ರಾಮೀಣ ಪ್ರದೇಶದಲ್ಲಿ ಇರುವ ರೈತರು ಸರಕಾರ ರೂಪಿಸಿದ ಹಲವಾರು ಅಭಿವೃದ್ಧಿಪರ ಯೋಜನೆಗಳ ಬಳಕೆಯಿಂದ ಅದರ ಫಲಾನುಭವಿಗಳಾಗಿ. ರೈತರು ತಮಗೆ ಬೇಕಾದ ಸರಕಾರದ ಯೋಜನೆಗಳನ್ನು ಬಳಸಿ ತಮ್ಮ ಭೂಮಿಯನ್ನು ನೀರಾವರಿ ಭೂಮಿಯನ್ನಾಗಿ ಮಾಡಿ ಅತೀ ಹೆಚ್ಚಿನ ಆದಾಯಗಳಿಸುತ್ತಾ ಅಭಿವೃದ್ಧಿಹೊಂದಿ ತಾವು ವಾಸಿಸುತಿದ್ದ ಹಳೆಯ ಗುಡಿಸಲನ್ನು ಬಿಟ್ಟು ಹೊಸದಾಗಿ ಮನೆಗಳನ್ನು ನಿರ್ಮಾಣ ಮಾಡಿಕೊಂಡು ಜೀವನಕ್ಕೆ ಬೇಕಾದ ಮೂಲ ಸೌಕರ್ಯಗಳನ್ನು ಪಡೆದುಕೊಂಡು ತಮ್ಮ ಜೀವನ ಮಟ್ಟದ ಸುಧಾರಣೆ ತಂದು ಕೊಂಡಿದ್ದಾರೆ ಎಂದು ತಿಳಿದುಬರುತ್ತದೆ.

**ನೀರಾವರಿ ಬಳಕೆದಾರರ ಸಂಘಗಳು**

ಭಾರತವು - ಕೃಷಿ ಪ್ರಧಾನವಾದ ದೇಶ ಪ್ರತಿಶತ ೮೦% ರಷ್ಟು ಜನ ಕೃಷಿಯನ್ನೇ ಅವಲಂಬಿಸಿದ್ದರೆ. ಅಕಾಲಿಕ ಮಳೆಯಿಂದಾಗಿ ರೈತರು ಅನೇಕ ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ. ಈ ಎಲ್ಲ ಸಮಸ್ಯೆಗಳಿಗೆ ಪರಿಹಾರ ದೊರಕಿಸಲು ಸರಕಾರವು ಸಣ್ಣ ನಿರಾವರಿ ಯೋಜನೆಗಳಿಂದ ರೈತರ ಜಮೀನುಗಳಿಗೆ ನೀರನ್ನು ಕಲ್ಪಿಸುವದಕ್ಕಾಗಿ ಸಹಸ್ರಾರು ಕೋಟಿ ಹಣವನ್ನು ವೆಚ್ಚ ಮಾಡುತ್ತಿದೆ. ಈ ಯೋಜನೆಗಳಿಂದ ಕಲ್ಪಿಸಿದ ನೀರಾವರಿ ಸಾಮರ್ಥ್ಯದ ಪೂರ್ಣ ಪ್ರಮಾಣ ಸದ್ಯಕ್ಕೆ ಬಳಕೆಯಾಗುತ್ತಿಲ್ಲ. ಕಲ್ಪಸಿದ ನೀರಾವರಿ ಯೋಜನೆಯಿಂದ ರೈತರ ಹೊಲಗಳಿಗೆ ನೀರು ಪೂರೈಸುವದಕ್ಕೆ ಸರಕಾರವು ಬ್ರಹತ್ ಪ್ರಮಾನದಲ್ಲಿ ವೆಚ್ಚ ಮಾಡುತ್ತಿರುವದು ರೈತರಿಗೆ ಅರಿವು ಇಲ್ಲದಾಗಿದೆ. ನೀರಿನ ಹಂಚಿಕೆಯಲ್ಲಿ ಯಾವುದೆ ಶಿಸ್ತು ಇಲ್ಲದೆ ಕಾಲುವೆಯ ಮೊದಲ ಹಂತದಲ್ಲಿ ರೈತರು ಅವಶ್ಯಕತೆಗಿಂತ ಹೆಚ್ಚು

ನೀರು ಬಳಸುತ್ತಿದ್ದು ಕಾಲುವೆಯ ಕೊನೆಯ ಹಂತದವರೆಗೆ ನೀರು ತಲುಪದೆ ರೈತರು ನೀರಿನ ಅಭಾವಕ್ಕೆ ತುತ್ತಾಗುತ್ತಾರೆ. ಅವಶ್ಯಕತೆಗಿಂತ ಹೆಚ್ಚಿನ ನೀರು ಬಳಸುತ್ತಿರುವದರಿಂದ ಜಮೀನು ಸವಳು ಜವಳು ಆಗುವ ಸಾಧ್ಯತೆ ಹೆಚ್ಚಾಗಿದೆ. ಬೃಹತ್ ನೀರಾವರಿ ಯೋಜನೆಗಳಲ್ಲಿ ವಾರಾಬಂದಿ ಪದ್ಧತಿಯ ಮೂಲಕ ನೀರನ್ನು ತಮ್ಮ ಜಮೀನುಗಳಿಗೆ ನೀರನ್ನು ಉಣಿಸದೆ ಇರುವದು ಹಾಗೆಯೆ ರಾತ್ರಿಯ ಸಮಯದಲ್ಲಿ ನೀರಾವರಿ ಮಾಡದೆ ಇರುವದರಿಂದ ಪ್ರತಿಶತ ಸುಮಾರು ೪೦% ರಷ್ಟು ನೀರು ಪೋಲಾಗಿ ಹೊಳೆ ಹಳ್ಳ ಸೇರುತ್ತಿರುವದು ವಾಸ್ತವ. ನೀರಾವರಿ ಪ್ರದೇಶದಲ್ಲಿ ವೈಜ್ಞಾನಿಕ ರೀತಿಯಲ್ಲಿ ಯೋಗ್ಯ ಬೇಳೆಗಳ ತಳಿಗಳ ಮತ್ತು ಬೆಲೆಯ ಪದ್ಧತಿಗಳ ಹಾಗೂ ನೀರಾವರಿ ಪದ್ಧತಿಗಳ ಅರಿವು ಸಾಮಾನ್ಯ ರೈತರಿಗೆ ಇಲ್ಲದಂತಾಗಿದೆ. ಈ ಎಲ್ಲ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವಲ್ಲಿ ಸರಕಾರವು ಉನ್ನತ ಮಟ್ಟದಲ್ಲಿ ಚಿಂತನೆ ನಡೆಸಿ ನೀರಿನ ನಿರ್ವಹಣೆಯಲ್ಲಿ ರೈತರು ಪಾಲ್ಗೊಳ್ಳುವಿಕೆಯಿಂದ ಸಮಸ್ಯೆಗಳಿಗೆ ಸೂಕ್ತ ಪರಿಹಾರ ಸಿಗುವುದೆಂದು ನಿರ್ಣಯಿಸಿದ್ದು ನಿಜಕ್ಕೂ ಸ್ವಾಗತಾರ್ಹ. ನೀರಾವರಿಯಲ್ಲಿ ರೈತರು ಪಾಲ್ಗೊಳ್ಳುವಿಕೆ ಇದೇನು ಹೊಸ ವಿಷಯವಲ್ಲ. ಇತಿಹಾಸದ ಪುಟಗಳನ್ನು ತಿರುವಿ ನೋಡಿದಾಗ ಬ್ರಿಟಿಷರ ಆಡಳಿತದಲ್ಲಿ ಕೆರೆಗಳ ಕಟ್ಟಿಸಿ ನಿರ್ವಹಣೆಗಾಗಿ ಅವುಗಳನ್ನು ರೈತರಿಗೆ ವಹಿಸಿಕೊಟ್ಟು ಅವುಗಳ ಮುಖಾಂತರ ರೈತರು ತಾವೇ ನೀರಿನ ವ್ಯವಸ್ಥೆ ಮಾಡಿಕೊಂಡಿರುವದು ಕಂಡು ಬರುತ್ತದೆ.[೧೨]

ಈ ನೀರಿನ ವ್ಯವಸ್ಥೆಗೆ ತಾವೇ ಖರ್ಚು–ವೆಚ್ಚವನ್ನು ಭರಿಸಿ ಸಮನಾಗಿ ಹಾಗೂ ಸಮರ್ಪಕವಾಗಿ ನೀರನ್ನು ತಮ್ಮ ಹೊಲ ಗದ್ದೆಗಳಿಗೆ ನೀರನ್ನು ತಮ್ಮ ಹೊಲ ಗದ್ದೆಗಳಿಗೆ ಉಣಿಸಿಕೊಂಡಿರುವ ನಿರ್ದೇಶನಗಳಿವೆ. ಈಗ ಮಾಧ್ಯಮ ಅಥವಾ ಸಣ್ಣ ನೀರಾವರಿ ಯೋಜನೆಯಲ್ಲಿ ರೈತರ ಸಹಭಾಗಿತ್ವದ ಬಿರುಗಾಳಿ ಬೀಸಿದೆ. ಯೊಜನೆಗಳನ್ನು ಅಚ್ಚುಕಟ್ಟು ಪ್ರದೇಶದಲ್ಲಿ ರೈತರ ಸಹಭಾಗಿತ್ವದಿಂದಲೇ. ನೀರಿನ ನಿರ್ವಹಣೆಯನ್ನು ನಡೆಸಿಕೊಂಡು ಹೋಗುವ ನಿಟ್ಟಿನಲ್ಲಿ ಸಹಕಾರ ತತ್ವದ ತಳಹದಿಯಲ್ಲಿ ನೀರು ಬಳಕೆದಾರರು ಸಹಕಾರ ಸಂಘಗಳು ರಚನೆಗಳಾಗಿವೆ. ಈ ಸಂಘಗಳಿಗೆ ನೀರಿನ ಹಂಚಿಕೆ ಜವಾಬ್ದಾರಿಯನ್ನು ಮತ್ತು ರೈತರು ತಮ್ಮ ಜಮೀನುಗಳಿಗೆ ಪಡೆದುಕೊಂಡಿರುವ ನೀರಿನ ದರವನ್ನು ನಿಗದಿ ಮಾಡಿ ವಸೂಲಿ ಮಾಡುವ ಅಧಿಕಾರವನ್ನು ಕರ್ನಾಟಕ ನೀರಾವರಿ ಕಾಯ್ದೆಗೆ ತಿದ್ದುಪಡಿ ತರುವದರ ಮೂಲಕ ಸಂಘಗಳಿಗೆ ವಹಿಸಿಕೊಟ್ಟಿದೆ. ನೀರಾವರಿ ಅಚ್ಚುಕಟ್ಟು ಪ್ರದೇಶಗಳಲ್ಲಿ ಲ್ಯಾಟ್ರಲ್ ಹಂತದ ಮೇಲೆ ಸುಮಾರು ೫೦೦ ಹೆಕ್ಟರ್ ಜಮೀನುಗಳಿಗೆ ನಿಯಮಿತವಾಗಿ ನೀರು ಬಳಕೆದಾರರ ಸಂಘಗಳು ರಚನೆಯಾಗಿವೆ. ಪ್ರಾರಂಭದಲ್ಲಿ ಸಂಘಗಳು ತಮ್ಮ ಕಾರ್ಯವ್ಯಾಪ್ತಿಯಲ್ಲಿ ಬರುವವಾಸ್ತವಿಕ ಕಾಲುವೆ ದುರಸ್ತಿ, ದುರಸ್ತಿ ಕಾರ್ಯವನ್ನು ಸಂಘಗಳ ಮುಖಾಂತರವೇ ಮಾಡಿಸಿ ನೀರವರಿ ಇಲಾಖೆ ಹಾಗೂ ಸಂಘಗಳ ನಡುವೆ ಒಡಂಬಡಿಕೆ ಏರ್ಪಟ್ಟ ನಂತರ ಅವುಗಳಿಗೆ ನೀರಿನ ವ್ಯವಸ್ಥೆಯ ಹಸ್ತಾಂತರ ಮಾಡಿಕೊಡಲಾಗುತ್ತದೆ.

---

೧೨. 'ಸಹಕಾರ ಪತ್ರಿಕೆ' (ಮಾಸ ಪತ್ರಿಕೆ) – ಸಂ. ಶ್ರೀ ಬಸವರಾಜ ತೆಳೇವಾಡ ಜನೆವರಿ ೪ ೨೦೧೫. ಪುಟ ಸಂಖ್ಯೆ – ೩೦.೩೧

ಈ ಪ್ರಕಾರವಾಗಿ ಸಂಘಗಳು ತಮ್ಮ ಕಾರ್ಯಕ್ಷೇತ್ರಕ್ಕನುಗುಣವಾಗಿ ಬೆಳೆಗಳ ಅನುಗುಣವಾಗಿ ಬೇಕಾಗುವ ನೀರಿನ ಪ್ರಮಾಣ ಬೇಡಿಕೆಯನ್ನು ಇಲಾಖೆಗೆ ಸಲ್ಲಿಸಬೇಕಾಗುತ್ತದೆ. ತಮಗೆ ಬೇಕಾಗುವ ನೀರಿನ ಪ್ರಮಾಣವನ್ನು ನೀರಾವರಿ ಇಲಾಖೆಯಿಂದ ಸಗಟು ರೂಪದಲ್ಲಿ ಪಡೆಯಬೇಕಾಗುತ್ತದೆ. ಅಳವಡಿಸಿದ ನೀರೀನ ಅಳತೆ ಮಾಪನ ಮುಖಾಂತರ ಇಲಾಖೆಯು ಪ್ರತಿ ಸಾವಿರ ಘನ ಮೀಟರ ನೀರಿಗೆ ರೂಪಾಯಿ ೧೨ ರಂತೆ ದರವನ್ನು ನಿಗದಿ ಮಾಡಿ ಪೂರೈಸುತ್ತದೆ. ಸಂಘವು ಪಡೆದುಕೊಂಡ ನೀರನ್ನು ತಮ್ಮ ಕ್ಷೇತ್ರದಲ್ಲಿ ಬರುವ ರೈತರ ಜಮೀನುಗಳಿಗೆ ಸಮವಾಗಿ ಸಮರ್ಪಕವಾಗಿ ಹಂಚುವ ಜವಾಬ್ದಾರಿ ಸಂಘದ್ದಾಗಿರುತ್ತದೆ. ಈ ರೀತಿ ರೈತರ ಜಮೀನುಗಳಿಗೆ ಪೂರೈಸಿದ ನೀರಿನ ಕರವನ್ನು ಸರಕಾರವು ನಿಗದಿ ಪಡಿಸಿದ ಬೆಳೆವಾರು ಎಕರೆವಾರು ದರಗಳ ಪ್ರಕಾರ ವಸೂಲಿ ಮಾಡಬೇಕಾಗುತ್ತದೆ. ಸರಕಾರವು ನಿಗದಿ ಪಡಿಸಿದ ದರಗಳಿಗಿಂತ ಕಡಿಮೆ ದರವನ್ನು ನಿಗದಿಪಡಿಸುವ ಅಧಿಕಾರ ಸಂಘಕ್ಕೆ ಇರುವದಿಲ್ಲ. ಆದರೆ ಹೆಚ್ಚಿನ ದರವನ್ನು ನಿಗದಿ ಪಡಿಸುವ ಅಧಿಕಾರ ಸಂಘದ ವಾರ್ಷಿಕ ಮಹಾಸಭೆಗೆ ಅಧಿಕಾರವಿದ್ದು ಈ ರೀತಿಯಾಗಿ ವಸೂಲಿ ಮಾಡಿದ ನೀರಿನ ಕರದಲ್ಲಿ ಪ್ರತಿಶತ ೨೦% ರಷ್ಟು ಸಂಘದ ಆಡಳಿತ ವೆಚ್ಚಕ್ಕೆ ಇಟ್ಟುಕೊಂಡು ಉಳಿದ ಭಾಗವನ್ನು ಸರಕಾರದ ಅಥವಾ ಕೃಷ್ಣಭಾಗ್ಯಜಲ ನಿಗಮದ ಖಾತೆಗೆ ಜಮಾ ಮಾಡುವದು ಸಂಘದ ಕರ್ತವ್ಯವಾಗಿರುತ್ತದೆ. ಸಂಗದ ಕಾರ್ಯಕ್ಷೇತ್ರದಲ್ಲಿ ಬರುವ ಕಾಲುವೆಗಳನ್ನು ಸುಸ್ಥಿತಿಯಲ್ಲಿಡಲು ಕರ ವಸೂಲಿಯಲ್ಲಿ ಪ್ರತಿ ಹೆಕ್ಟರಿಗೆ ರೂಪಾಯಿ ೪೦ರಂತೆ ಅನುದಾನ ಪಡೆಯಬಹುದಾಗಿದೆ. ಸಂಘವು ಪಾವತಿಸಬೇಕಾದ ಕರವನ್ನು ನಿಗದಿತ ಅವಧಿಯೊಳಗೆ ಪಾವತಿಸಿದರೆ ಪ್ರತಿಶಿತ ೨% ರಷ್ಟು ಉತ್ತೇಜನ ಹಣವೆಂದು ಪಡೆಯಲು ಅರ್ಹವಾಗುತ್ತದೆ.ಸಂಘದ ಕಾರ್ಯಕೇತ್ರಕ್ಕೆ ಅನುಗುಣವಾಗಿಪ್ರತಿಯೊಬ್ಬ ರೈತರಿಂದ ಪ್ರತಿ ಹೆಕ್ಟೇರ ಜಮೀನಗೆ ರೂಪಾಯಿ ೧೨೦ ರಂತೆ ತಮ್ಮ ಪಾಲಿನ ವಂತಿಕೆಯನ್ನು ಸಂಗ್ರಹಿಸಿದರೆ ಕೇಂದ್ರ ಸರಕಾರದ ಅನುದಾನದಿಂದ ಪ್ರತಿ ಹೇಕ್ಟರಿಗೆ ರೂಪಾಯಿ ೫೪೦ ಹಾಗೂ ರಾಜ್ಯ ಸರಕಾರದಿಂದ ರೂಪಾಯಿ ೫೪೦ ಹೀಗೆ ಒಟ್ಟು ರೂಪಾಯಿ ೧೦೮೦ ಪ್ರತಿ ಹೆಕ್ಟೇರಿಗೆ ಕಾಡಾ ಪ್ರಾಧಿಕಾರವು ಮಂಜೂರು ಮಾಡುತ್ತದೆ. ಈ ರೀತಿ ಸಂಗ್ರಹಿಸಿದ ರೈತರ ಪಾಲಿನ ವಂತಿಕೆಗೆ ಮತ್ತು ಕಾಡಾ ಪ್ರಾಧಿಕಾರದಿಂದ ಬಿಡುಗಡೆಯಾದ ಹಣ ಒಟ್ಟು ಮೊತ್ತಕ್ಕೆ ಡಿ.ಸಿ.ಸಿ ಬ್ಯಾಂಕಿನಲ್ಲಿ ಸಂಘಟನಾ ಮುಖ್ಯ ಕಾರ್ಯನಿರ್ವಾಹಕ ಹಾಗೂ ಭೂ ಅಭಿವೃದ್ದಿ ಅಧಿಕಾರಿಗಳು (ಸಹಕಾರ) ಇವರ ಹೆಸರಿನಲ್ಲಿ ಮುದ್ದತ ಠೇವು ಮಾಡಿಸಿ ಅದರ ಮೇಲೆ ಆಕರಣೆಯಾಗುವ ಬಡ್ಡಿಯಲ್ಲಿ ಸಂಘದ ಆಡಳಿತ ವೆಚ್ಚವನ್ನು ಭರಿಸಿಕೊಳ್ಳಬಹುದು.

ಸಂಘದ ಕಾರ್ಯಕ್ಷೇತ್ರದಲ್ಲಿ ಬರುವ ಹರಿಜನ, ಗಿರಿಜನ, ರೈತರಿಗೆ ಸಂಘದಲ್ಲಿ ಸದಸ್ಯತ್ವ ಪಡೆಯುವುದು.ಶೇರು ಸಹಾಯಧನವನ್ನು ಕೂಡ ಪ್ರಾಧಿಕಾರವು ಮಂಜೂರು ಮಾಡುತ್ತದೆ. ಈ ಎಲ್ಲ ಮೂಲಗಳಿಂದ ಬಂದ ಹಣವು ಸಂಘಗಳ ಆರ್ಥಿಕ ಸಂಪನ್ಮೂಲ ಕ್ರೋಢಿಕೃತವಾಗುವದಲ್ಲದೆ ಸದಸ್ಯರಲ್ಲಿ ಸಹಕಾರದ ಮನೋಭಾವನೆ ಉಂಟುಮಾಡುತ್ತದೆ.

ನೀರಾವರಿ ನೀರು ನಿರ್ವಹಣೆಯಲ್ಲಿ ರೈತರ ಸಹಭಾಗಿತ್ವ ಯಶಸ್ವಿಯಾಗಬೇಕಾದರೆ ನೀರು ಬಳಕೆದಾರರ ಸಹಕಾರ ಸಂಘಗಳ ಪದಾಧಿಕಾರಿಗಳ ಮೇಲೆ ಹೆಚ್ಚಿನ ಜವಾಬ್ದಾರಿ ಇದೆ.

ಸರಕಾರದ ಅಧಿಕಾರ ಮತ್ತು ಅಧಿಕಾರಿಗಳ ಅಧಿಕಾರ ಈ ಎರಡನ್ನು ನೀರು ಬಳಕೆದಾರರ ಸಹಕಾರ ಸಂಘಗಳಿಗೆ ಸರಕಾರವು ವಹಿಸಿ ಕೊಟ್ಟಿರುವದರಿಂದ ಇದರ ಸದುಪಯೋಗ ಪಡೆದು ನೀರು ಬಳಕೆದಾರರ ಸಹಕಾರಿ ಸಂಘಗಳು ಈ ದಿಶೆಯಲ್ಲಿ ಕಾರ್ಯೋನ್ಮುಖವಾದರೆ ದೇಶದಲ್ಲೇ ಕರ್ನಾಟಕ ರಾಜ್ಯದ ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿಲ್ಲಿ ಸಂಘಗಳು ಕಂಡು ಬರುತ್ತವೆ.

೧. ನೀರು ಬಳಕೆದಾರರ ಸಹಕಾರಿ ಸಂಘ ಕೋಹಳ್ಳಿ

೨. ನೀರು ಬಳಕೆದಾರರ ಸಹಕಾರಿ ಸಂಘ ಮಧಬಾವಿ

೩. ನೀರು ಬಳಕೆದಾರರ ಸಹಕಾರಿ ಸಂಘ ಯಲ್ಲಮವಾಡಿ

೪. ನೀರು ಬಳಕೆದಾರರ ಸಹಕಾರಿ ಸಂಘ ಕಾಗವಾಡ

ಈ ಮೇಲಿನ ಎಲ್ಲಾ ನೀರು ಬಳಕೆದಾರರ ಸಹಕಾರಿ ಸಂಘವು ತಮ್ಮ ಗ್ರಾಮದಲ್ಲಿ ಇರುವ ನೀರಾವರಿ ಕೆರೆಗಳ ಮೂಲಕ ಗ್ರಾಮದ ಎಲ್ಲಾ ರೈತರಿಗೆ ನೀರನ್ನು ಹಂಚುವ ಕಾರ್ಯೋನ್ಮುಖರಾಗಿದ್ದಾರೆ ಈ ನೀಟ್ಟಿನಲ್ಲಿ ದೇಶದ ಎಲ್ಲಾ ಬಾಗಗಳಲ್ಲಿ. ನೀರಿನ ನಿರ್ವಹಣೆಯಲ್ಲಿ ರೈತರ ಸಹಭಾಗಿತ್ವ ಇದರೆ ಸಾಕು ಯಶಸ್ವಿ ಸಾಧಿಸುವಲ್ಲಿ ಸಂದೇಹವೇ ಇಲ್ಲ ಎಂದು ಹೇಳಬಹುದು. ಹಾಗೂ ನೀರು ಬಳಕೆದಾರರ ಸಹಕಾರಿ ಸಂಘದ ಕೆಲವು ಉದ್ಧೇಶಗಳನ್ನು ಈ ಕೆಳಗಿನಂತೆ ನೋಡಬಹುದು.

**ಯೋಜನೆಯ ಉದ್ದೇಶಗಳು**

೧ ನೈಸರ್ಗಿಕ ಸಂಪನ್ಮೂಲಗಳ ಅಭಿವೃದ್ಧಿ.

೨ ಕುಡಿಯುವ ನೀರು ಮತು ಅರಣ್ಯೀಕರಣದಲ್ಲಿ ಸುಧಾರಣೆ.

೩ ಕೃಷಿಯ ಉತ್ಪಾದನಾ ಸಾಮರ್ಥ್ಯವನ್ನು ಹೆಚ್ಚಿಸುವುದು.

೪ ನೀರಾವರಿ ಪ್ರದೇಶವನ್ನು ಹೆಚ್ಚಿಸುವುದು.

೫ ಪಶುಪ್ರಾಣಿ ಅಭಿವೃದ್ಧಿ.

೬ ಪರಿಸರದ ಅಭಿವೃದ್ಧಿ.

೭ ಆದಾಯ ಮತ್ತು ಉದ್ಯೋಗ ನಿರ್ಮಾಣ.

೮ ಕೃಷಿಕರ ಕೌಶಲ್ಯ ಮತ್ತು ತಾಂತ್ರಿಕತೆಯ ಅಭಿವೃದ್ಧಿ.

೯ ನೀರನ್ನು ಸಮನಾಗಿ ಹಂಚಿಕೆ ಮಾಡುವುದು.

೧೦ ನೀಗದಿತ ಕರ ವಸೂಲಿ ಮಾಡುವುದು.

೧೧ ರೈತರಿಗೆ ಸಿಗಬೇಕಾದ ಸರಕಾರದ ಅನುದಾನ ದೋರೆಯುವಂತ್ತೆ ಮಾಡುವುದು.

**೨ ಸರಕಾರ ಹಾಗೂ ಸರಕಾರೇತರ ಸಂಸ್ಥೆಗಳಿಂದ ಸಹಾಯ ಹಸ್ತ.**




ಈ ಮೇಲಿನ ಚಿತ್ರಣವನ್ನು ನೋಡಿದಾಗ ನಮಗೆ ಬರುವ ಒಂದು ವಿಚಾರ ವೆಂದರೆ ನಮ್ಮ ರಾಷ್ಟ್ರದ, ರಾಜ್ಯದ, ಜಿಲ್ಲೆಯ, ತಾಲೂಕಿನ ಅಭಿವೃದ್ಧಿಯಾಗಲು ಒಂದು ಉದಾಹರಣೆ "ಒಂದೇ ಕೈಯಿಂದ ಚಪ್ಪಾಳೆ ಆಗಲು ಸಾಧ್ಯವಿಲ್ಲ" ಅಭಿವೃದ್ಧಿಯಾಗ ಬೇಕಾದರೆ ಒಬ್ಬ ವ್ಯಕ್ತಿ, ಸರಕಾರದ ಯೋಜನೇಗಳು ಅಥವಾ ಸರಕಾರೇತರ ಸಂಸ್ಥೆಗಳಿಂದ ಅಭಿವೃದ್ಧಿಯಾಗಲು ಸಾಧ್ಯವಿಲ್ಲ. ಹೇಗೆ ಎರಡು ಕೈಗಳು ಸೇರಿದಾಗ ಚಪ್ಪಾಳೆ ಯಾಗಲು ಸಾದ್ಯವೋ ಹಾಗೆ ನೀರಾವರಿ ವ್ಯವಸ್ಥೆಯಲ್ಲಿ ಅಭಿವೃದ್ಧಿಯನ್ನು ಸಾದಿಸಲು ಸರಕಾರ, ರೈತ, ಇತರೆ ಸಂಸ್ಥೆಗಳ ಒಂದು ಸಹಾಯ ಹಸ್ತ ಬೇಕೆ ಬೇಕು ಈ ನೀಟ್ಟಿನಲ್ಲಿ ಎಲ್ಲರ ಸಹಭಾಗಿತ್ವ ಇದ್ದರೆ ಸಾಕು ಅಭಿವೃದ್ಧಿ ಸಾಧಿಸುವಲ್ಲಿ ಯಶಸ್ಸು ಕಾಣಬಹುದು.

**ರೈತನ ಅಭಿವೃದ್ಧಿಗೆ ಸರಕಾರ ಯೋಜನೆಗಳು**

**ಉಚಿತ ತರಬೇತಿ :** ಕೃಷಿಗೆ ಸಂಬಂಧಿಸಿದ ಎಲ್ಲಾ ಕೃಷಿ ವಿಶ್ವ ವಿದ್ಯಾಲಯಗಳು ರೈತರ ಬಾಳು ಹಸನಾಗಲಿಯನ್ನುವ ದಿಶೆಯಲ್ಲಿ ರೈತರಿಗೆ ಬರುವ ತೊಂದರೆಗೆ ಕೃಷಿ ವಿಶ್ವ ವಿದ್ಯಾಲಯಗೂ ಕೃಷಿ ಸಮ್ಮೇಳನದಲ್ಲಿ ಅನೇಕ ಅಭಿವೃದ್ಧಿ ಪರ ವಿಚಾರಗಳ ಬಗ್ಗೆ ಮುಕ್ತವಾಗಿ ಚರ್ಚಿಸುವ ಮುಖಾಂತರ ರೈತರಿಗೆ ಬರುವ ಹಲವಾರು ಸಮಸ್ಯೆಗೆ ಪರಿಹಾರ ನೀಡಿ. ಅಭಿವೃದ್ಧಿಯಲ್ಲಿ ಸಹಕಾರಿಯಾಗಿ ಮತ್ತು ಸರಕಾರ ಜಾರಿಗೆ ತಂದ ಹಲವಾರು ವಿಶೇಷ ಯೋಜನೆಯ ಲಾಭಗಳ ಬಗ್ಗೆ ಮಾಹಿತ್ತಿ ಹೇಳುವುದರ. ಜೋತೆ ಹೊಸ ಹೊಸ ಯಂತ್ರಗಳ ಬಳಕೆ ಮಾಡುವದರ ಬಗ್ಗೆ ರೈತರಗೆ ಉಚಿತವಾಗಿ ತರಬೇತಿ ನೀಡಿ ಮತ್ತು ಉಚಿತವಾದ ಸಲಹೆ ನೀಡಲು ಉಚಿತ ಕಾರ್ಯಗಾರವನ್ನು ನೇಮಿಸುತ್ತಾರೆ. ಅದರ ಲಾಭವನ್ನು ಪಡೆದ ರೈತರು ಅಭಿವೃದ್ಧಿಯಾಗುವಲ್ಲಿ

ಸಂದೇಹವಿಲ್ಲ. ಅಥಣಿ ತಾಲೂಕಿನ ರೈತರು ಇಂತಹ ಉಚಿತ ತರಬೇತಿ ಮತ್ತು ಉಚಿತ ಕಾರ್ಯಗಾರ ನಡೆಸುತ್ತಿರುವುದಕ್ಕೆ ಸಾಕ್ಷಿ ಎಂದರೆ ಅಥಣಿ ತಾಲೂಕಿನ ಐನಾಪೂರ ಗ್ರಾಮದ ಶ್ರೀ ಸಿದ್ದೇಶ್ವರ ಜಾತ್ರೇಯಲ್ಲಿ ಪ್ರತಿ ವರ್ಷ ಕೃಷಿ ಸಮ್ಮೇಳನ ನಡೆಸುವಲ್ಲಿ ಇತಿಹಾಸದ ಪುಟಗಳಲ್ಲಿ ದಾಖಲೆ ನಿರ್ಮಿಸಿದ್ದಾರೆ. ಅದೇ ರೀತಿಯಾಗಿ ಅಥಣಿಯ ಶ್ರೀ ಮುರುಘೇಂದ್ರ ಶಿವಯೋಗಿಗಳ ಜಾತ್ರೆ ನಿಮಿತ್ಯ ೨೦೧೩ರಲ್ಲಿ ನಡೆದ ಕೃಷಿ ಮೇಳ ಇದಕ್ಕೆ ಸಾಕ್ಷಿ ಈ ಮೇಳದಲ್ಲಿ ಗ್ರಾಮದಲ್ಲಿ ಹೆಚ್ಚು ಆದಾಯ ಗಳಿಸಿದ ರೈತರಿಗೆ **"ಆದರ್ಶ ರೈತ"** ಎಂದು ಪ್ರಶಸ್ತಿ ನೀಡಿ ಗೌರವ ನೀಡುತ್ತಾರೆ. ಈ ಪ್ರಶಸ್ತಿ ನೀಡುವ ಉದ್ದೇಶ ಗ್ರಾಮದ ಎಲ್ಲಾ ರೈತರು ಆದರ್ಶ ರೈತರು ಆಗಲಿ ಎಂಬ ಕನಸು ನಮ್ಮ ರೈತರದು.

**ರಿಯಾಯಿತಿಯಲ್ಲಿ ಭಿತ್ತನೆ ಬೀಜ ವಿತ್ತರಣೆ** : ಕರ್ನಾಟಕ ರಾಜ್ಯ ಸರಕಾರದಿಂದ ರೂಪಿತವಾದ "ಸ್ವಬೀಜಾಭಿವೃದ್ಧಿ ಯೋಜನೆ ಅನುಷ್ಠಾನ" ರೈತರ ಅನೂಕೂಲಕ್ಕಾಗಿ ಮಳೆಯಾದ ನಂತರ ಬೀತ್ತನೆ ಮಾಡಲು ಸರಕಾರ ಒಳ್ಳೆಯ ಗುಣಮಟ್ಟದ ಬೀಜಗಳನ್ನು ಸರಕಾರೇತರ ಸಂಸ್ಥೆಯಿಂದ ಪಡೆದು ರೈತರಿಗೆ ರಿಯಾಯಿತಿ ದರದಲ್ಲಿ ನೀಡುವಲ್ಲಿ ಸಹಕಾರಿಯಾಗಿದೆ. ರೈತರು ಹೆಚ್ಚಿನ ಪ್ರಮಾಣದಲ್ಲಿ ಉತ್ಪಾದನೆಯನ್ನು ಮಾಡಿ ಅವರ ಅಭಿವೃದ್ಧಿ ಬದುಕನ್ನು ಸಾಧಿಸಲು ಸಹಕಾರಿಯಾಗಿ ಬೆಳಗಾವಿ ಜಿಲ್ಲೆಯಲ್ಲಿ ಅಥಣಿ ತಾಲೂಕಿನಲ್ಲಿ ಬರುವ ಸಹಾಯಕ ನಿರ್ದೇಶಕರು ಕೃಷಿ ಸಂಪನ್ಮೂಲ ಇಲಾಖೆ ಅಥಣಿ ತಾಲೂಕಿನಲ್ಲಿ ಕಾರ್ಯ ನಿರ್ವಹಿಸುತ್ತಿದೆ. ವಿತರಣೆ ಮಾಡುತ್ತಿರುವ ಬೀಜಗಳು : ಮೆಕ್ಕೆ ಜೋಳ, ಗೋದಿ, ಶೇಂಗಾ, ಸೂರ್ಯಕಾಂತಿ, ಸಜ್ಜೆ, ಹೆಸರು, ಜೋಳ ಇತ್ಯಾದಿ ಬೀಜಗಳು. ನೀಡುವ ಮೂಲಕ ಗ್ರಾಮದ ಅನೇಕ ರೈತರು ಇದರ ಫಲಾನುಭವಿಗಳಾಗಿದ್ದಾರೆ.

**ಸಹಾಯವಾಣಿ** : ಕರ್ನಾಟಕ ಸರಕಾರವು ರೈತರಿಗೆ ತರಬೇತಿ, ಮಾರ್ಗದರ್ಶನ ಹಾಗೂ ಆತ್ಮ ವಿಶ್ವಾಸವರ್ಧನೆಗೆ ಸಹಾಯವಾಣಿ ಕೇಂದ್ರಗಳ ಸ್ಥಾಪನೆ ಮಾಡಿದ್ದು ರೈತರಿಗೆ ಯಾವುದೇ ಸಮಯದಲ್ಲಿ ತೊಂದರೆಗಳು ಅಥವಾ ಸಮಸ್ಯೆ ಕಂಡು ಬಂದಾಗ ಸಹಾಯವಾಣಿ ಉಪಯೋಗಿಸಿ ತಮ್ಮ ಸಮಸ್ಯೆ ಹೇಳಿದರೆ ಅದಕ್ಕೆ ಕೃಷಿ ಸಂಪನ್ಮೂಲ ವ್ಯಕ್ತಿಗಳಿಂದ ಸೂಕ್ತ ಪರಿಹಾರ ನೀಡುವಲ್ಲಿ ಸರಕಾರ ಬಹು ಮುಖ್ಯ ಪಾತ್ರ ವಹಿಸಿದೆ ಎಂದು ಹೇಳಬಹುದು.

**ಕೃಷಿ ಯಂತ್ರಗಳ ಸರಬರಾಜು** : ಅಭಿವೃದ್ಧಿಯಲ್ಲಿ ದಾಪುಗಾಲು ಹಾಕುತ್ತಿರುವ ರಾಜ್ಯದಲ್ಲಿ ಕರ್ನಾಟಕವು ಒಂದು ಅದಕ್ಕಾಗಿ ಕರ್ನಾಟಕ ಸರಕರವು ಕೃಷಿಗೆ ಸಂಬಧಿಸಿದ ಹಲವಾರು ಹೊಸ ಹೊಸ ಯಂತ್ರಗಳನ್ನು ನಮ್ಮ ರಾಜ್ಯದಲ್ಲಿ ಇರುವ ರೈತರು ಉಪಯೋಗಿಸಿ ಹೆಚ್ಚಿನ ಪ್ರಮಾಣದ ಬೆಳೆ ಬೆಳೆದು ಹೆಚ್ಚಿನ ಆದಾಯಗಳಿಸಲಿ ಎಂಬ ಮನೋಭಾವಣೆಯಿಂದ ಕರ್ನಾಟಕ ಸರಕಾರ ಇಂದು ರೈತರಿಗೆ ರಿಯಾಯಿತಿಯಲ್ಲಿ ಕೃಷಿಗೆ ಸಂಬಧಿಸಿದ ಬೇರೆ ಬೇರೆ ರೀತಿಯಾದ ಯಂತ್ರಗಳ ಉಪಯೋಗದ ಬಗ್ಗೆ ಮಾಹಿತಿ ನೀಡಿ ರಿಯಾಯಿತಿ ದರದಲ್ಲಿ ಅವರ ಭೂ ಕಾರ್ಯ ಕ್ಷೇತ್ರದ ಮೇಲೆ ಯಾವ ರೀತಿಯಾದ ಯಂತ್ರ ನೀಡಬೇಕು ಎಂದು ತಿಳಿದು, ಅವರಿಗೆ

ಯಂತ್ರಗಳ ವಿತರಣೆ ಮಾಡುವುದು. ಅಥಣಿ ತಾಲೂಕಿನ ಕೃಷಿ ಸಂಪನ್ಮೂಲ ಇಲಾಖೆಯ ಕಾರ್ಯವಾಗಿದೆ ಎಂದು ತೀಳಿಯಬಹುದು. ತಾಲೂಕಿನ ಕೃಷಿ ಸಂಪನ್ಮೂಲ ಇಲಾಖೆಯಿಂದ ವಿತರಿಸುತ್ತಿರುವ ಯಂತ್ರಗಳು ಉದಾಹರಣೆ : ನೇಗಿಲುಗಳು, ಕುಂಟೆಗಳು, ರೂಟರ ಯಂತ್ರಗಳು, ಹೀಗೆ ಮುಂತಾದ ಯಂತ್ರಗಳ ಸರಬರಾಜು ಮಾಡಿ ರೈತರ ಕೃಷಿ ಬೆಳವಣಿಗೆ ಯಶಸ್ಸುಕಂಡಿದೆ. ನೀರಾವರಿ ಪಂಪಸೆಟ್‌ಗಳು ಹಾಗೂ ಇಂಧನ ಚಾಲಿತ ಯಂತ್ರಗಳಲ್ಲಿ ಸೌರ ಶಕ್ತಿಯ ಬಳಕೆಗೆ ಶೇಕಡಾ ೭೫% ರಷ್ಟು ಸಹಾಯಧನ ನೀಡುವುದು. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಫಲಾಭವಿಗಳಿಗೆ ವಿಶೇಷವಾದ ಸಹಾಯಧನ ನೀಡುವಲ್ಲಿ ಸರಕಾರದ ಯೋಜನೆ ಯಶಸ್ಸು ಕಂಡಿದ್ದೆ.

**ನೀರಾವರಿ ವ್ಯವಸ್ಥೆಯಲ್ಲಿ ಸಹಾಯ ಹಸ್ತ :** ಕರ್ನಾಟಕ ಸರಕಾರ ರೂಪಿಸಿದ ಅತಿ ಉಪಯುಕ್ತ ಯೋಜನೆಯಲ್ಲಿ ಹನಿ ನೀರಾವರಿ ಯೋಜನೆ ಒಂದಾಗಿದೆ. ಈ ಯೋಜನೆಯನ್ನು ರೈತರು ಬೆಳವಣಿಗೆಗೆ ಅತಿ ಹೆಚ್ಚಿನ ಪ್ರಮಾಣದಲ್ಲಿ ಸಹಾಯಕವಾಗಿದೆ. ರೈತರಿಗೆ ಕಡಿಮೆ ನೀರಿನ ವ್ಯವಸ್ಥೆ ಇದ್ದರೂ ಕೂಡಾ ಆ ನೀರಿನಲ್ಲೆ ಹೆಚ್ಚಿನ ಪ್ರಮಾಣದ ಬೆಳೆಯನ್ನು ಬೆಳೆಯಲು ಹನಿ ನೀರಾವರಿಯನ್ನು ಅಳವಡಿಸಿದ್ದು ಇದನ್ನು ಗ್ರಾಮೀಣ ಪ್ರದೇಶದಲ್ಲಿ ಇರುವ ಜನರಿಗೆ ಸಹಾಯಧನ ನೀಡುವ ಮುಖಾಂತರ ಯೋಜನೆಯನ್ನು ಯಶಸ್ವಿ ಮಾಡಿದರು. ಇನ್ನಷ್ಟು ಬೆಳೆಗಾರರಿಗೆ ವಿಸ್ತರಿಸುವುದು ಸರಕಾರದ ಉದ್ಧೇಶ ಇದಕ್ಕಾಗಿ ಹನಿ ನೀರಾವರಿ ಅಳವಡಿಕೆಗಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಫಲಾಭವಿಗಳಿಗೆ ಶೇಕಡಾ ೯೦% ರಷ್ಟು ಹಾಗೂ ಇತರರಿಗೆ ಶೇಕಡಾ ೭೫%ರಷ್ಟು ಸಹಾಯಧನ ನೀಡುವುದು. ಎಂದು ತೀಳಿದ ರೈತರು ತಾವು ಬೆಳೆಯುತ್ತಿರುವ ಬೆಳೆಗಳಲ್ಲಿ ವ್ಯತ್ಯಾಸವನ್ನು ತರುವಲ್ಲಿ ಭಾಗಿಯಾಗಿದ್ದಾರೆ ಎಂದು ಹೇಳಬಹುದು. ಉದಾರಣೆಗೆ ತಾವು ಮೊದಲು ಬೆಳೆಯುತ್ತಿದ್ದ ಬೆಳೆಗಳು ಗೋಧಿ, ಜೋಳ, ಮೆಕ್ಕೆಜೋಳ, ಕಡಲೆ, ಬೆಳೆಗಳನ್ನು ಬಿಟ್ಟು ವಾಣಿಜ್ಯ ಬೆಳೆಗಳಾದ ಅರಿಶಿನ, ಕಬ್ಬು, ದ್ರಾಕ್ಷಿ, ಡಾಳಿಂಬೆ, ಹೀಗೆ ಮೂಂತಾದ ಬೆಳೆ ಬೆಳೆಯಲು ಪ್ರಾರಂಭ ಮಾಡಿದ್ದಾರೆ ಎಂದು ತಿಳಿದುಬರುತ್ತದೆ.

# ಅಧ್ಯಾಯ – ಮೂರು

## ಅಥಣಿ ತಾಲೂಕಿನ ಸಣ್ಣ ನೀರಾವರಿಯ ಅಭಿವೃದ್ಧಿ ವಿಶ್ಲೇಷಣೆ

೧. ಸಣ್ಣ ನೀರಾವರಿಯ ಮೂಲಗಳ ಅಭಿವೃದ್ಧಿ

೨. ಸಣ್ಣ ನೀರಾವರಿಯ ಅನುಕೂಲತೆಗಳು

೩. ಸಣ್ಣ ನೀರಾವರಿಯ ಅನಾನುಕೂಲತೆಗಳು

೪. ಸಣ್ಣ ನೀರಾವರಿಗೆ ಸರಕಾರದ ಅಭಿವೃದ್ಧಿ ಯೋಜನೆಗಳು

# ಅಥಣಿ ತಾಲೂಕಿನ ಸಣ್ಣ ನೀರಾವರಿಯ ಅಭಿವೃದ್ಧಿ ವಿಶ್ಲೇಷಣೆ

## ೧. ಸಣ್ಣ ನೀರಾವರಿಯ ಮೂಲಗಳ ಅಭಿವೃದ್ಧಿ.

ಮಾನವನ ಇತಿಹಾಸದಲ್ಲೇ ಪ್ರಥಮ ಬಾರಿಗೆ ಜಲಕ್ಷಾಮ ತೀವ್ರ ಪ್ರಕೃತಿ ಸಮಸ್ಯೆಯಾಗುತ್ತಿದೆ. ವಿಜ್ಞಾನಯುಗ ಆರಂಭಗೊಳ್ಳುವ ಮುನ್ನ ಪ್ರಕೃತಿ ವಿಕೋಪವು ಕಾಲ ಕಾಲಕ್ಕೆ ನೆರೆಯಾಗಿಯೋ ಬರವಾಗಿಯೋ ಮಾನವ ಕುಲವನ್ನು ಕಾಡುತ್ತಿದ್ದುದುಂಟು. ಅದರೆ ಪ್ರಕೃತಿ ತನ್ನ ಸಮತೋಲನ ಪಾಲನೆ ಗುಣದಿಂದಾಗಿ ಅತೀ ಶೀಘ್ರವಾಗಿ ಸಮಸ್ಯೆಯನ್ನು ಪರಿಹರಿಸಿದ್ದುಂಟು. ಸತತವಾಗಿ ಕಾಡು ಕಡಿಯುತ್ತಾ ಸಾಗಿರುವುದರಿಂದ ಮಳೆಯ ಪ್ರಮಾಣದಲ್ಲಿ ಇಳಿಮುಖವಾಗಿದೆ. ನಿರಂತರ ಕೊಳವೆ ಬಾವಿಗಳನ್ನು ಕೊರೆದು ನೀರನ್ನು ಬರಿದು ಮಾಡುತ್ತಿರುವುದರಿಂದ ಅಂತರ್ಜಲ ಪ್ರಮಾಣ ಕುಸಿತಗೊಂಡಿದೆ. ಇರುವ ಕೆರೆ, ಕಟ್ಟೆ, ಬಾವಿ ಜಲಾಶಯಗಳಲ್ಲಿ ಹೂಳು ತುಂಬಿರುವುದರಿಂದ ನೀರಿನ ಸಂಗ್ರಹಣಾ ಸಾಮರ್ಥ್ಯ ಕಡಿಮೆಯಾಗುತ್ತಿದೆ. ಅಂತರ್ಜಲ ಆವರಿಸಿಕೊಂಡಿರುವ ಕಲ್ಲಿನ ಪದರುಗಳನ್ನು ಈ ಕೆಳಗಿನಂತೆ ನೋಡಬಹುದು. ಭೂಮಿಯಲ್ಲಿ ಇರುವ ಕಲ್ಲಿನ ಪದರುಗಳು

| | | |
|---|---|---|
| ೧ | ಮಣ್ಣಿನ ವಲಯ | ೦–೨೦ ಅಡಿ |
| ೨ | ಶಿಥಿಲ ವಲಯ | ೨೦–೮೦ ಅಡಿ |
| ೩ | ಟೊಳ್ಳು ಪದರ ವಲಯ | ೮೦–೩೦೦ ಅಡಿ |
| ೪ | ಗಟ್ಟಿ ಶಿಲಾ ವಲಯ | ೩೦೦ ಅಡಿಗಳಿಗಿಂತ ಹೆಚ್ಚು |

ಈ ಮೇಲೆ ನೋಡಿದಾಗ ನಾವು ಕೊಳವೆಬಾವಿ ಕೊರೆಯುವ ವಿಧಾನವನ್ನು ಅನುಸರಿಸುತ್ತಾ ಬಂದು ಸುಮಾರು ೨೫ ವರ್ಷಗಳಾದವು ಭೂಮಿ ಉದ್ಭವವಾಗಿ ಸಾವಿರಾರು ಮಿಲಿಯನ್ ವರ್ಷಗಳಾಗಿವೆ.[೧೩] ಸಾವಿರಾರು ವರ್ಷಗಳಿಂದ ಸಂಗ್ರಹವಾಗಿರುವ ಅಂತರ್ಜಲ ನಿಕ್ಷೇಪವನ್ನು (ಸಂಪನ್ಮೂಲ) ನಾವು ಕೇವಲ ೨೫ ವರ್ಷಗಳ ಅವಧಿಯಲ್ಲಿ ಬರಿದು ಮಾಡಿದ್ದೇವೆ. ಭೂಮಿಯ ಎಲ್ಲಾ ಪದರುಗಳಲ್ಲಿ ಲಭ್ಯವಿರುವ ನೀರನ್ನೆಲ್ಲಾ ಮೇಲೆತ್ತಿ ಆವಿ ಮಾಡಿದ್ದೇವೆ. ಭೂಮಂಡಲದಲ್ಲಿ ಲಭ್ಯವಿರುವಂತಹ ಸಿಹಿ ನೀರಿನ ಪಾಲಿನಲ್ಲಿ ಸುಮಾರು ಶೇಕಡಾ ೫೨% ರಷ್ಟು ನೀರನ್ನು ಬರಿದಾಗಿಸಿದ್ದೇವೆ. ಇನ್ನು ಕೇವಲ ಶೇಕಡಾ ೪೮% ರಷ್ಟು ಮಾತ್ರ ಸಿಹಿ ನೀರಿನ ಸಂಪನ್ಮೂಲ ಭೂಮಿಯಲ್ಲಿ ಅಡಗಿದೆ. ಈ ನೀರು ಕೇವಲ ಕಾಡು, ಗುಡ್ಡ, ಬೆಟ್ಟ, ಬಂಜರು ಭೂಮಿ ಇನ್ನೂ ಮುಂತಾದ ಮಾನವ ಪ್ರವೇಶ ಮಾಡದೆ ಇರುವ ಕಡೆ ಮತ್ತು ಬಳಸದೆ ಇರುವ ಭೂಪ್ರದೇಶದಲ್ಲಿ ಮಾತ್ರ ಇದೆ.

---

೧೩. 'ಸಹಕಾರ ಪತ್ರಿಕೆ' (ಮಾಸ ಪತ್ರಿಕೆ) – ಸಂ. ಶ್ರೀ ಎನ್.ಜಿ.ದೇವರಾಜರೆಡ್ಡಿ – ಫೆಬ್ರುವರಿ ೨೨ ೨೦೧೫. ಪುಟ ಸಂಖ್ಯೆ – ೩೧

ನಮ್ಮಗೆಲ್ಲಾ ತಿಳಿದಿರುವ ಹಾಗೆ ೨೫ ವರ್ಷಗಳ ಹಿಂದೆ ಕೊಳವೆ ಬಾವಿಗಳ ನೀರು ಪರಿಶುದ್ಧವಾಗಿತ್ತು. ನಾವು ಆ ದಿನಗಳಲ್ಲಿ ಕೇವಲ ೮೦ ರಿಂದ ೧೦೦ ಅಡಿಗಳ ವರೆಗೆ ಮಾತ್ರ ಕೊಳವೆ ಬಾವಿ ಕೊರೆದು ನೀರನ್ನು ಬಳಸುತ್ತಿದ್ದೆವು.[೧೪] ಮಳೆಯ ಕಣ್ಣಾ ಮುಚ್ಚಾಲೆ ಮತ್ತು ಅಂತರ್ಜಲದ ಅತೀ ಬಳಕೆಯಿಂದ ನೀರಿನ ಮಟ್ಟ ಕುಸಿದು ಭೂಮಿಯ ಆಳಕ್ಕೆ ಹೋದಂತೆಲ್ಲಾ ಲವಣಾಂಶಗಳು ಹೆಚ್ಚಿನ ಮಟ್ಟದಲ್ಲಿ ಕರಗಿ ನೀರು ಗಡಸಾಗುತ್ತಿದೆ. ಆದುದರಿಂದ ಅತೀ ಆಳದಲ್ಲಿ ಸಿಗುವ ನೀರು ಎಷ್ಟೇ ಪ್ರಮಾಣದಲ್ಲಿ ದೊರೆತರೂ ಕುಡಿಯುವುದಕ್ಕೆ ಮತ್ತು ಕೃಷಿಗೂ ಸಹ ಯೋಗ್ಯವಲ್ಲ. ಅದಕ್ಕಾಗಿ ಮಳೆಯ ನೀರನ್ನು ಸಂಗ್ರಹಿಸಿ ಉಪಯೋಗಿಸುವುದು ಮತ್ತು ಮಳೆ ನೀರನ್ನು ಭೂಮಿಯಲ್ಲಿ ಇಂಗುವಂತೆ ಮಾಡಬೇಕು.

**ಮಳೆಯ ವಿಂಗಡಣೆ**

ನೀರು ಸೂರ್ಯನ ಕಿರಣಗಳ ತಾಪಮಾನದಿಂದ ಕಾದು ನೀರು ಆವಿಯಾಗಿ ಮೇಲಕ್ಕೆ ಹೋಗಿ ಸಾಂದ್ರೀಕರಣಗೊಂಡು ಮೋಡವಾಗಿ ಆ ಮೊಡಗಳು ಘರ್ಷಣೆಯಿಂದಾಗಿ ಮಳೆಯಾಗುತ್ತದೆ ಈ ಮಳೆಯಲ್ಲಿ ಈ ಕೆಳಗಿನಂತೆ ವಿಂಗಡನೆ ಮಾಡಬಹುದು.

ನಮ್ಮಲ್ಲಿ ಬೀಳುವ ಮಳೆಯನ್ನು ೪ ಭಾಗಗಳಾಗಿ ವಿಂಗಡಿಸಿದ್ದಾರೆ.

೧ ಜನೇವರಿ – ಫೆಬ್ರುವರಿ – ಮೊದಲ ಅವಧಿ

೨ ಮಾರ್ಚ – ಮೇ – ಮಳೆಗಾಲಕ್ಕೆ ಮುಂಚಿನ ಅವಧಿ

೩ ಜೂನ್ – ಸೆಪ್ಟೆಂಬರ್ – ಮುಂಗಾರು (ಎಸ್.ಇ. ಮಾನ್ಸೂನ್)

೪ ಅಕ್ಟೋಬರ್ – ಡಿಸೆಂಬರ್ – ಹಿಂಗಾರು (ಎನ್. ಇ. ಮಾನ್ಸೂನ್)

ನಮ್ಮ ರಾಜ್ಯದಲ್ಲಿ ಮಳೆ ಸಾಮಾನ್ಯವಾಗಿ ಏಪ್ರಿಲ್ ತಿಂಗಳಲ್ಲಿ ಪ್ರಾರಂಭಗೊಂಡು ಡಿಸೆಂಬರ್ ತಿಂಗಳವರೆಗೂ ಬರುತ್ತದೆ. ಸುಮಾರು ೨೦ ವರ್ಷಗಳ ಹಿಂದೆ ಬೀಳುತ್ತಿದ್ದ ಮಳೆಯಲ್ಲಿ ಅಂತರ ಕಡಿಮೆ ಇರುತ್ತಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಮಳೆಗಳ ಅಂತರ ಹೆಚ್ಚಾಗುತ್ತದೆ ಮತ್ತು ಬೀಳುವ ಮಳೆಯ ತೀವ್ರತೆ ಕೆಲವೊಮ್ಮೆ ಹೆಚ್ಚಾಗಿರುತ್ತದೆ. ಈ ಕಾರಣದಿಂದ ಬಿದ್ದ ಮಳೆ ನೀರನ್ನೆಲ್ಲ ಭೂಮಿ ಕುಡಿಯುವ ಅವಕಾಶ ಕಡಿಮೆ ಇರುತ್ತದೆ. ಇದರಲ್ಲಿ ಸುಮಾರು ಶೇಕಡಾ ೬೨ ರಷ್ಟು ನೀರು ವ್ಯರ್ಥವಾಗಿ ಸಮುದ್ರ ಸೇರುತ್ತದೆ ಮತ್ತು ಮಣ್ಣಿನಲ್ಲಿ ಇರುವ ತೇವಾಂಶವನ್ನು ಬಿಸಿಗಾಳಿ ಬೇಗನೆ ಆವಿ ಮಾಡುತ್ತದೆ. ಭೂಮಿಯಲ್ಲಿ ನೀರು ಇಂಗುವ ಪ್ರಕ್ರಿಯೆ ಕಡಿಮೆಯಾಗುತ್ತದೆ. ನಾವು ಅತೀ ವೇಗವಾಗಿ ಬಿದ್ದ ಮಳೆ ನೀರನ್ನು ಭೂಮಿಯ ಮೇಲ್ಭಾಗದಲ್ಲಿ ಎಷ್ಟೇ ಪ್ರಮಾಣದಲ್ಲಿ ಶೇಖರಿಸಿದರೂ ಇತ್ತೀಚಿನ ದಿನಗಳಲ್ಲಿ ಹೆಚ್ಚಾಗುತ್ತಿರುವ ಬಿಸಿ ಗಾಳಿಯ ತೀವ್ರತೆಯಿಂದ ಹೆಚ್ಚಿನ ನಷ್ಟವಾಗುತ್ತದೆ.

---

೧೪. 'ಸಹಕಾರ ಪತ್ರಿಕೆ' (ಮಾಸ ಪತ್ರಿಕೆ) – ಸಂ. ಶ್ರೀ ಎನ್.ಜಿ.ದೇವರಾಜರೆಡ್ಡಿ – ಫೆಬ್ರುವರಿ ೨೨ ೨೦೧೫. ಪುಟ ಸಂಖ್ಯೆ – ೩೨

ನಾವು ನೀರನ್ನು ಸಂಗ್ರಹಿಸಲು ಇರುವ ಒಂದು ಸುರಕ್ಷಿತವಾದ ಸ್ಥಳವೆಂದರೆ ಭೂಮಿಯ ಆಳಕ್ಕೆ ನೀರನ್ನು ಇಂಗುವಂತೆ ಮಾಡುವುದು. ಬಿದ್ದ ಮಳೆ ನೀರು ೩೦ ಮೀಟರ್ ಗಿಂತಲೂ ಹೆಚ್ಚಿನ ದೂರ ಹರಿಯುವುದರೊಳಗಾಗಿ ನೀರನ್ನು ಇಂಗುವಂತೆ ಮಾಡಬೇಕು ಇದಕ್ಕೆಲ್ಲಾ ಬೇರೆ ದೇಶದ ವಿಜ್ಞಾನಿಗಳ ಅವಶ್ಯಕತೆ ಇಲ್ಲ. ನಮ್ಮ ಊರಲ್ಲೇ ಇರುವಂತಹ ಹಿರಿಯರು ಮತ್ತು ವಯಸ್ಸಾದ ಅಜ್ಜಂದಿರಿಗೆ ಈ ತಂತ್ರಜ್ಞಾನ ಗೊತ್ತಿದೆ. ನಾವು ಕೇಳುತ್ತಿಲ್ಲ. ನಮ್ಮ ಹಿಂದಿನ ಪೂರ್ವಜರು ಪಾಲಿಸುತ್ತಿದ್ದ ನೀರಿನ ಸಂರಕ್ಷಣಾ ಪದ್ಧತಿಗಳನ್ನು ನಾವು ಪಾಲಿಸಿದರೆ ನೂರಕ್ಕೆ ನೂರರಷ್ಟು ಯಶಸ್ಸು ಲಭಿಸಿತ್ತದೆ.

ಅಥಣಿ ತಾಲೂಕಿನಲ್ಲಿ ಬೀಳುವ ಮಳೆಯನ್ನು ಅಳತೆ ಮಾಡುವಲ್ಲಿ ಸರಕಾರವು ಅಥಣಿ ತಾಲೂಕಿನಲ್ಲಿ ಸುಮಾರು ೧೦ ಮಳೆ ಮಾಪನ ಕೆಂದ್ರಗಳನ್ನು ನಿರ್ಮಿಸಿ ಅಥಣಿ ತಾಲೂಕಿನಲ್ಲಿ ಬೀಳುವ ಮಳೆಯ ಪ್ರಮಾಣದ ಬಗ್ಗೆ ಮಾಹಿತಿ ನೀಡುತ್ತದೆ. ಮಳೆ ನೀರಿನಿಂದ ತಾಲೂಕಿನಲ್ಲಿ ಇರುವ ನೀರಾವರಿ ಮೂಲಗಳನ್ನು ಈ ಕೆಳಗಿನಂತೆ ನೋಡಬಹುದು.

**ಬಾವಿ.**

ಭೂಮಿಯ ಮೇಲೆ ನೀರಿನ ಸಂಗ್ರಹವನ್ನು ಗುರುತಿಸಿ ಆ ಸ್ಥಳದಲ್ಲಿ ನಿರ್ದಿಷ್ಟ ಆಕಾರವನ್ನು ಇಟ್ಟುಕೊಂಡು ಆ ಸ್ಥಳದಲ್ಲಿ ಭೂಮಿಯನ್ನು ಆಳವಾಗಿ ತೋಡಿ ನೀರನ್ನು ಸಂಗ್ರಹಿಸುವ ವ್ಯವಸ್ಥೆಗೆ ಬಾವಿ ಎಂದು ಕೆರೆಯುತ್ತಾರೆ. ಒಟ್ಟು ನೀರಾವರಿ ಸೌಲಭ್ಯ ಹೊಂದಿದ ಭೂಮಿಯಲ್ಲಿ ೩೦% ಪಾಲು ಬಾವಿ ನೀರಾವರಿಯದಾಗಿದೆ. ಬಾವಿಗಳು ರೈತರ ಸ್ವಂತ ಸ್ವತಾಗಿದ್ದು. ಸರಕಾರ ಬಾವಿ ತೋಡಲು ಸಾಲ ನೀಡುತ್ತದೆ. ಉದಾಹರಣೆ – ಮಹಾತ್ಮಾ ಗಾಂಧಿ ಉದ್ಯೋಗ ಖಾತ್ರಿ ಯೋಜನೆ ಅಡಿ ೨೦೦೯ರಲ್ಲಿ ಸಾಲದ ರೂಪದಲ್ಲಿ ರೈತರಿಗೆ ಸಾಲ ನೀಡಿದೆ. ಹಾಗೂ ಅಥಣಿ ತಾಲೂಕಿನಲ್ಲಿ ಭಾವಿಯಿಂದ ಒಟ್ಟು ೨೭,೫೫೨ ಹೆಕ್ಟೇರ್ ಪ್ರದೇಶ ನೀರಾವರಿಗೊಂಡಿದೆ.

**ಕೊಳವೆ ಬಾವಿ.**

ಭೂಮಿಯ ಒಳಗೆ ಆಳವಾದ ರಂಧ್ರ ತೋಡಿ ವಿದ್ಯುಚ್ಚಕ್ತಿಯ ಮೂಲಕ ನೀರು ಮೇಲೆ ಬರುವಂತೆ ಮಾಡುವ ವಿಧಾನವನ್ನು ಕೊಳವೆ ಬಾವಿ ನೀರಾವರಿ ಎಂದು ಕರೆಯುತ್ತಾರೆ. ಇಂದು ದೇಶದ ಪ್ರತಿಯೊಂದು ರಾಜ್ಯಗಳಲ್ಲಿ ಕಂಡು ಬರುತ್ತಿದೆ. ಮತ್ತು ಅಥಣಿ ತಾಲೂಕಿನಲ್ಲಿ ಕೊಳವೆ ಬಾವಿ ನೀರಾವರಿಯನ್ನು ಬಳಸಿಕೋಂಡು ೧೩,೩೧೦ ಹೆಕ್ಟೇರ ಪ್ರದೇಶ ನೀರಾವರಿಗೊಂಡಿದೆ.

**ಕೆರೆ ನೀರಾವರಿ.**

ಮಳೆಯ ನೀರು ಒಂದೆಡೆ ಸಂಗ್ರಹವಾಗಿ ಅದರ ನೀರನ್ನೆ ನೀರಾವರಿ ಉದ್ದೇಶಕ್ಕೆ ಉಪಯೋಗಿಸುತ್ತಿರುವದಕ್ಕೆ ಕೆರೆ ನೀರಾವರಿ ಎಂದು ಕರೆಯುತ್ತೇವೆ.ಒಟ್ಟು ನೀರಾವರಿಯಲ್ಲಿ ಕೆರೆ

ನೀರಾವರಿಯ ಪಾಲು ೭% ಅಥವಾ ೮% ಇದೆ. ಭಾರತದಲ್ಲಿ ಸುಮಾರು ೩೨ ಲಕ್ಷ ಹೆಕ್ಟೇರ್ ಭೂಮಿಗೆ ನೀರಾವರಿಯಾಗುತ್ತಿದೆ. ಅಥಣಿ ತಾಲೂಕಿನಲ್ಲಿ ೨೦೧೫ರ ವೇಳೆಗೆ ೩೭ ಕೆರೆಗಳನ್ನು ಹೊಂದಿದೆ. ಅದರಲ್ಲಿ ೪೦೪೫.೩೦ ಹೆಕ್ಟೇರ ಪ್ರದೇಶ ನೀರಾವರಿಗೊಂಡಿದೆ.

**ಕಾಲುವೆ ನೀರಾವರಿ.**

ನದಿಗಳಿಗೆ ಎತ್ತರವಾದ ಸ್ಥಳಗಳಲ್ಲಿ ಆಣೆಕಟ್ಟೆಗಳನ್ನು ಕಟ್ಟಿ ನೀರನ್ನು ಸಂಗ್ರಹಿಸಿ ಆ ನೀರನ್ನು ಕಾಲುವೆಗಳ ಮೂಲಕ ಹೊಲ ಗದ್ದೆಗಳಿಗೆ ಪೂರೈಸುವದಕ್ಕೆ ನದಿ ಕಾಲುವೆ ನೀರಾವರಿಯೆಂದು ಕರೆಯುತ್ತಾರೆ. ಇಂತಹ ಕಾಲುವೆಗಳನ್ನು ಸರಕಾರವೇ ನಿರ್ಮಿಸುತ್ತದೆ. ಒಟ್ಟು ನೀರಾವರಿಯಾಗುವ ಭೂ ಪ್ರದೇಶದಲ್ಲಿ ಸುಮಾರು ೫೫೦ ಭಾಗ ಕಾಲುವೆ ನೀರಾವರಿಯಿಂದ ಆಗುತ್ತದೆ. ಹಾಗೂ ಅಥಣಿ ತಾಲೂಕಿನಲ್ಲಿ ಬರುವ ಕಾಲುವೆ ನೀರಾವರಿಯಿಂದ ೨,೨೪೭ ಹೆಕ್ಟೇರ ಪ್ರದೇಶ ನೀರಾವರಿ ಸೌಲಭ್ಯ ಪಡೆದುಕೋಂಡಿದೆ.

ಅಥಣಿ ತಾಲೂಕಿನಲ್ಲಿ ಬರುವ ನೀರಾವರಿ ಇತರೆ ಮೂಲಗಳಿಂದ ಸುಮಾರು ೫೧,೪೨೫ ಹೆಕ್ಟೇರ ಪ್ರದೇಶ ನೀರಾವರಿಯಾಗುವ. ಮೂಲಕ ಅಭಿವೃದ್ಧಿ ಜೊತೆಗೆ ವ್ಯವಸಾಯದಲ್ಲಿ ನೀರಾವರಿ ವ್ಯವಸ್ಥೆ ಒಂದು ಮುಖ್ಯ ಪಾತ್ರವಹಿಸಿದೆ. ಆ ನಿಟ್ಟಿನಲ್ಲಿ ಅಥಣಿ ತಾಲೂಕಿನಲ್ಲಿ ವ್ಯವಸಾಯಕ್ಕಾಗಿ ಬಳಸುತ್ತಿರುವ ನೀರಾವರಿ ಪದ್ದತಿಗಳು ಹಾಗೂ ಅದರ ಅನೂಕೂಲತೆಗಳನ್ನು ಈ ಕೆಳಗಿನಂತೆ ನೋಡಬಹುದು.

**ನೀರಾವರಿಯ ಪದ್ದತಿಗಳು.**

ಕೃಷಿಯಲ್ಲಿ ಅಭಿವೃದ್ಧಿ ಸಾಧಿಸಲು ಭೂಮಿಯನ್ನು ಉಳುಮೆ ಮಾಡಿದರೆ ಸಾಲದು. ಭಿತ್ತಿದ ಬೆಳೆಗೆ ಸೂಕ್ತ ನೀರಿನ ವ್ಯವಸ್ಥೆ ಮಾಡುವುದು ಅಷ್ಟೆ ಮುಖ್ಯವಾಗಿದೆ. ಆ ನೀರಾವರಿ ವ್ಯವಸ್ಥೆ ಮಾಡುವ ನಿಟ್ಟಿನಲ್ಲಿ ಹಲವಾರು ಕೃಷಿ ಪಂಡಿತರು, ತಂತ್ರಜ್ಞಾನಗಳ ಮುಖಾಂತರ ಹಲವಾರು ನೀರಾವರಿ ಪದ್ದತಿಗಳನ್ನು ನಮಗೆ ನೀಡಿದ್ದಾರೆ ಅವುಗಳನ್ನು ಈ ಕೆಳಗಿನಂತೆ ತಿಳಿಯಬಹುದು.

೧. ಹನಿ ನೀರಾವರಿ.

೨. ತುಂತುರು ನೀರಾವರಿ.

೩. ಮಡಿಕೆ ನೀರಾವರಿ.

೪. ಸಾಂಪ್ರದಾಯಿಕ ನೀರಾವರಿ

೫. ಮಲಚಿಂಗ್ ಪೇಪರ್ ನೀರಾವರಿ.

ಈ ಮೇಲಿನ ನೀರಾವರಿ ಪದ್ದತಿಗಳನ್ನು ಅನುಸರಿಸೂತ್ತಾ ಅಥಣಿ ತಾಲೂಕಿನ ಜನರು ತಮ್ಮ ಕೃಷಿಯಲ್ಲಿನ ಆದಾಯವನ್ನು ಹೆಚ್ಚಿಸುವಲ್ಲಿ ಸಾದನೆ ಮಾಡಿದ್ದಾರೆಂದು ಹೇಳಬಹುದು. ಈ

ನೀರಾವರಿಯ ಪದ್ಧತಿಯ ಬಗ್ಗೆ ಹಾಗೂ ನೀರಾವರಿ ವ್ಯವಸ್ಥೆಯಿಂದ ಸಿಗುವ ಅನೂಕುಲತೆಗಳನ್ನು ಇಲ್ಲಿ ನೋಡಬಹುದು.

**ಹನಿ ನೀರಾವರಿ.**

ಹನಿ ನೀರಾವರಿ ನೀರಿನ ನಿರ್ವಹಣೆಯಲ್ಲಿನ ಇತ್ತೀಚಿನ ಅಭಿವೃದ್ಧಿಯಾಗಿದೆ. ಈ ವಿಧಾನದಲ್ಲಿ ಪಿವಿಸಿ ಕೊಳವೆಯ ಮೂಲಕ ಲಭ್ಯವಿರುವ ನೀರನ್ನು ಪ್ರತಿಯೊಂದು ಸಸ್ಯಗಳ ಸಮೀಪಕ್ಕೆ ಅಗತ್ಯ ಪ್ರಮಾಣದಲ್ಲಿ ಹನಿ ಹನಿಯಾಗಿ ಹಾಯಿಸುವ ಒಂದು ವ್ಯವಸ್ಥೆಗೆ ಹನಿ ನೀರಾವರಿ ಎನ್ನುತ್ತಾರೆ. ಹನಿ ನೀರಾವರಿ ನೀರನ್ನು ನಿಧಾನವಾಗಿ ಹನಿ ಹನಿಯಾಗಿ ಹರಿಸುವುದರಿಂದ ಮಣ್ಣು ಸದಾ ತೇವವಾಗಿರುವುದಲ್ಲದೆ ಸಸ್ಯಗಳು ಸತತವಾಗಿ ನೀರನ್ನು ಪಡೆಯುತ್ತವೆ. ಈ ವಿಧಾನವು ನೀರು ಮಣ್ಣಿನೊಳಗೆ ಇಳಿಯುವಂತೆ ಮಾಡುವುದಲ್ಲದೆ ನೀರು ವ್ಯರ್ಥವಾಗದಂತೆ ಮತ್ತು ಆವಿಯಾಗದಂತೆ, ನಷ್ಟವಾಗದಂತೆ ತಡೆಯುತ್ತದೆ. ಈ ವಿಧಾನದ ನೀರಾವರಿಯು ರಾಜ್ಯದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಜನಪ್ರಿಯವಾಗಿದೆ. ವ್ಯವಸಾಯ ಮಾಡುವ ವೇಳೆಯಲ್ಲಿ ಎಲ್ಲಾ ಸಾಲು ಬೆಳೆಗಳಿಗೆ ಒದಗಿಸಬಹುದಾದರು ಹೆಚ್ಚಿನ ಅಂತರ ಕೊಟ್ಟು ಬೆಳೆಸುವ ಬೆಳೆಗಳಾದ ತೆಂಗು, ನಿಂಬೆ, ದಾಳಿಂಬೆ, ಬಾಳೆ, ಸೀಬೆ, ಪರಂಗಿ, ಮಾವು, ದ್ರಾಕ್ಷಿ, ಮತ್ತು ತೋಟಗಾರಿಕಾ ಬೆಳೆಗಳಲ್ಲಿ ಹೆಚ್ಚಾಗಿ ಅನುಸರಿಸಲು ಅವಕಾಶವಿದೆ. ಅದೇ ರೀತಿ ತಾಲೂಕಿನಲ್ಲಿ ಇರುವ ರೈತರು ವಾಣಿಜ್ಯ ಬೆಳೆಗಳಾದ ದ್ರಾಕ್ಷಿ, ಕಬ್ಬು, ಡಾಳಿಂಬೆ, ಅರಿಶಿಣ, ಹೀಗೆ ಹಲವಾರು ಬೆಳೆಗಳನ್ನು ಬೆಳೆದು ಉದ್ಯಮಶೀಲ ವ್ಯಕ್ತಿಯಾಗಿ ದೇಶಕ್ಕೆ ಮಾದರಿಯಾಗಿದ್ದಾರೆ.

**ಹನಿ ನೀರಾವರಿಯ ಅನುಕೂಲತೆ.**

- ಸಮರ್ಪಕ ನೀರಿನ ಬಳಕೆ ಸಾಧ್ಯವಾಗುತ್ತದೆ.
- ನೀರಿ ವೆಚ್ಚ ಉಳಿತಾಯವಾಗುತ್ತದೆ.
- ಸಸ್ಯದ ಬುಡದಲ್ಲಿ ನೀರು ನಿಲ್ಲುವ ಪ್ರಮಾಣ ಕಡಿಮೆ.
- ನೀರಿನ ಮತ್ತು ಪೋಷಕಾಂಶಗಳ ರಕ್ಷಣೆಯಿಂದ ಸುಮಾರು ೩೫% ಇಳುವರಿ ಹೆಚ್ಚಾಗುತ್ತದೆ.
- ಕಳೆಯ ಬೆಳವಣಿಗೆ ಕಡಿಮೆಯಾಗುತ್ತದೆ.
- ಕೂಲಿಯ ಉಳಿತಾಯವಾಗುತ್ತದೆ.
- ನೀರಿನ ಬಳಕೆಯನ್ನು ಶೇಕಡಾ ೫೦ ರಿಂದ ೬೦ ರಷ್ಟು ಕಡಿಮೆ ಮಾಡುತ್ತದೆ.
- ಸಾಕಷ್ಟು ನೀರು ಮಣ್ಣಿನೊಳಗೆ ಇಳಿಯುವಂತೆ ಮಾಡುತ್ತದೆ.
- ನೀರಿನ ನಷ್ಟವನ್ನು ತಡೆಗಟ್ಟುತ್ತದೆ.
- ನೀರು ಆವಿಯಾಗಿ ನಷ್ಟವಾಗುವುದನ್ನು ತಡೆಯುತ್ತದೆ.

❖ ಭೂ ಸವೆತವನ್ನು ಇಲ್ಲವಾಗಿಸುತ್ತದೆ.

❖ ಭೂಮಿಯ ಉತ್ಪಾದಕತೆ ಮತ್ತು ಇಳುವರಿಯನ್ನು ಹೆಚ್ಚಿಸುತ್ತದೆ.

❖ ಈ ಪದ್ಧತಿ ಹಣ್ಣು ಹೂವು ಮತ್ತು ತರಕಾರಿ ಬೆಳೆಗಳಿಗೆ ಸೂಕ್ತ.

❖ ವೆಚ್ಚವನ್ನು ಕಡಿಮೆಗೊಳಿಸುತ್ತದೆ ಮತ್ತು ಶ್ರಮದ ಉಳಿತಾಯವಾಗುತ್ತದೆ.

❖ ಹೆಚ್ಚಿನ ಆದಾಯಗಳಿಸುವಲ್ಲಿ ಸಹಕಾರಿಯಾಗಿದೆ.

**ತುಂತುರು ನೀರಾವರಿ.**

ತುಂತುರು ನೀರಾವರಿ ವಿಧಾನವು ಇತ್ತೀಚಿನ ಬೆಳವಣಿಗೆಯಾಗಿದೆ. ಈ ವಿಧಾನವು ನೀರಿನ ಸಮರ್ಥ ಬಳಕೆಯನ್ನು ಸಾಧ್ಯಗೊಳಿಸುತ್ತದೆ. ತುಂತುರು ನೀರಾವರಿ ವಿಧಾನದಲ್ಲಿ ಭೂಮಿಗೆ ನೀರನ್ನು ಸುತ್ತುತ್ತಿರುವ ತಿರುಗಣಿ ಮೂಲಕ ಚುಮುಕಿಸಲಾಗುತ್ತದೆ. ಅಂದರೆ ಈ ವಿಧಾನದಲ್ಲಿ ನೀರಿನ್ನು ತುಂತುರು ಹನಿ ರೂಪದಲ್ಲಿ ಒದಗಿಸಲಾಗುತ್ತದೆ. ಈ ನೀರಾವರಿ ವ್ಯವಸ್ಥೆಗೆ ತುಂತುರು ನೀರಾವರಿ ಎಂದು ಕರೆಯುತ್ತಾರೆ. ಈ ರೀತಿಯ ನೀರಾವರಿಯ ವಿಧಾನವನ್ನು ಮೊದಲು ಇಸ್ರೇಲ್ ದೇಶ ಅಭಿವೃದ್ಧಿಪಡಿಸಿತು. ಈ ವಿಧಾನದಲ್ಲಿ ನೀರಿನ ಬಳಕೆಯ ದಕ್ಷತೆಯ ಪ್ರಮಾಣ ಶೇಕಡಾ ೯೨% ರಷ್ಟಿರುತ್ತದೆ. ಭಾರತದಲ್ಲಿ ತುಂತುರು ನೀರಾವರಿಯನ್ನು ಮೊದಲು ಸರಕಾರಿ ಫಾರ್ಮಗಳಲ್ಲಿ ಮತ್ತು ಅರಣ್ಯ ಸಸ್ಯತೋಟಗಳಲ್ಲಿ ಪ್ರಯೋಗಿಸಲಾಯಿತು. ತುಂತುರು ನೀರಾವರಿ ವಿಧಾನವು ಕರ್ನಾಟಕದಲ್ಲಿ ಹೆಚ್ಚಿನ ಜನರು ಇದನ್ನು ಬಳಸುವ ಮುಖಾಂತರ ತುಂತುರು ನೀರಾವರಿಯು ಜನಪ್ರಿಯವಾಗಿದೆ. ಈ ರೀತಿಯ ಸೂಕ್ಷ್ಮ ನೀರಾವರಿ ಯೋಜನೆಯಲ್ಲಿ ೨೦೦೪-೦೫ರವರೆಗೆ ೧.೨ ದಶ ಲಕ್ಷ ಹೆಕ್ಟೇರ ಭೂಮಿಯನ್ನು ಅಳವಡಿಸಿಕೊಳ್ಳಲಾಗಿದೆ. ಮತ್ತು ತಾಲೂಕಿನ ಗ್ರಾಮೀಣ ಪ್ರದೇಶದಲ್ಲಿ ಇರುವ ಜನರು ಈ ನೀರಾವರಿ ಪದ್ಧತಿಯನ್ನು ಉಪಯೋಗಿಸಿ. ಗ್ರಾಮೀಣ ಭಾಗದಲ್ಲಿ ಬೇಕಾಗಿರುವ ಈರುಳ್ಳಿ ಸಸಿ ತಯಾರಿಕೆ, ಮೆಣಸಿನ ಸಸಿ ತಯಾರಿಕೆ, ಕಬ್ಬಿನ ಸಸಿ ತಯಾರಿಕೆ, ಹೀಗೆ ಹಲವಾರು ಸಸಿ ತಯಾರಿಕೆ ಮಾಡಿ ಮಾರಾಟ ಮಾಡುವಲ್ಲಿ ಹಾಗೂ ಸಸಿಗಳಿಗೆ ಬೀಳುವ ರೋಗ ತಡೆಗಟ್ಟುವಲ್ಲಿ ಯಶಸ್ಸುಗಳಿಸಿದ್ದಾರೆ.

**ತುಂತುರು ನೀರಾವರಿಯ ಅನುಕೂಲತೆ.**

❖ ಬೆಳೆಯ ರೋಗವನ್ನು ನಿಯಂತ್ರಿಸುತ್ತದೆ.

❖ ನೀರಿನ ಬಳಕೆ ಗರಿಷ್ಠವಿರುತ್ತದೆ (ಶೇಕಡಾ ೯೨ ರಷ್ಟು)

❖ ನೀರಿನ ಉಳಿತಾಯ ಅಧಿಕವಿರುತ್ತದೆ.

❖ ಅಧಿಕ ಉತ್ಪಾದಕತೆ ಸಹಕಾರಿ

- ಇಳುವರಿಯನ್ನು ಸುಧಾರಿಸುತ್ತದೆ.
- ಕ್ರಿಮಿಕೀಟಗಳು ನಿಯಂತ್ರಿಸುತ್ತದೆ
- ಭೂ ಸವೆತವನ್ನು ತಡೆಗಟ್ಟುತ್ತದೆ.
- ವೆಚ್ಚವನ್ನು ಕಡಿಮೆಗೊಳಿಸುತ್ತದೆ.
- ನೀರಿನ ವೈಜ್ಞಾನಿಕ ಬಳಕೆಗೆ ಅವಕಾಶ ನೀಡುತ್ತದೆ.
- ನೀರಿನ ನಷ್ಟವನ್ನು ತಡೆಗಟ್ಟುತ್ತದೆ.
- ಈ ಪದ್ಧತಿ ಹೂವು ಮತ್ತು ತರಕಾರಿ ಬೆಳೆಗಳಿಗೆ ಸೂಕ್ತ.
- ರೋಗ ನೀರೋಧಕ ಔಷಧಿ ಸಿಂಪಡಿಸುವುದಕ್ಕೆ ಸಹಕಾರಿಯಾಗಿದೆ.
- ವೆಚ್ಚವನ್ನು ಕಡಿಮೆಗೊಳಿಸುತ್ತದೆ ಮತ್ತು ಶ್ರಮದ ಉಳಿತಾಯವಾಗುತ್ತದೆ.

**ಮಡಿಕೆ ನೀರಾವರಿ**

ಗಿಡದ ತಾಯಿಬೇರಿನ ಹತ್ತಿರ ಮಡಿಕೆಗೆ ಸಣ್ಣ ರಂಧ್ರ ಮಾಡಿ ಹೂಳಬೇಕು. ಮಡಿಕೆಯಲ್ಲಿ ನೀರು ಹಾಕಿ ನೀರಾವರಿ ಮಾಡುವ ಪದ್ಧತಿಗೆ ಮಡಿಕೆ ನೀರಾವರಿ ಎಂದು ಕರೆಯುತ್ತಾರೆ. ಈ ಮಡಿಕೆ ನೀರಾವರಿ ಇತಿಹಾಸ ಕಾಲದಿಂದ ಬಂದಿರುವ ನೀರಾವರಿಯಾಗಿದೆ. ಆದರು ಅಥಣಿ ತಾಲೂಕಿನಲ್ಲಿ ಇರುವ ಪರಿಸರ ಪ್ರೇಮಿಗಳು ತಮ್ಮ ಮನೆಯ ಮುಂದೆ ಇರುವ ಹಣ್ಣು ಹಂಪಲು ಗಿಡಗಳ ಅಭಿವೃದ್ಧಿಗೆ ಈ ನೀರಾವರಿ ಪದ್ಧತಿಯನ್ನು ಅನುಸರಿಸುತ್ತಿದ್ದಾರೆ.

**ಮಡಿಕೆ ನೀರಾವರಿಯ ಅನಕೂಲತೆಗಳು.**

- ಗಿಡದ ತಾಯಿ ಬೇರಿಗೆ ನೀರು ಹೋಗುವದು.
- ಕಡಿಮೇ ವೆಚ್ಚದ ನೀರಾವರಿಯಾಗಿದೆ.
- ಉತ್ಪಾದನೆಯನ್ನು ಹೆಚ್ಚಿಸಬಹುದು.
- ಉದ್ಯೋಗ ದೊರೆಯುವ ನೀರಾವರಿಯಾಗಿದೆ.
- ನೀರು ವ್ಯರ್ಥವಾಗುವದಿಲ್ಲ
- ಗಿಡದ ಬೇರುಗಳ ಹತ್ತಿರ ಸತತವಾಗಿ ತಂಪಾದ ಸ್ಥಳವನ್ನಾಗಿ ಇರಿಸಬಹುದು.
- ಈ ಪದ್ಧತಿ ಗಿಡಗಳ ರೋಗ ತಡೆಯುವ ಪದ್ಧತಿಯಾಗಿದೆ.
- ಭೂ ಸವೆತವನ್ನು ತಡೆಗಟ್ಟುತ್ತದೆ.
- ಹಣ್ಣು ಹಂಪಲ ಬೆಳೆಯಲು ಅನೂಕೂಲಕರವಾಗಿದೆ.

❖ ಶ್ರಮದ ಬಳಕೆ ಸರಿಯಾದ ಪ್ರಮಾಣದಲ್ಲಿ ಇರುತ್ತದೆ.

❖ ನೀರಿನ ನಷ್ಟವನ್ನು ತಡೆಗಟ್ಟುತ್ತದೆ.

**ಸಾಂಪ್ರದಾಯಿಕ ನೀರಾವರಿ.**

ಸಾಂಪ್ರದಾಯಿಕ ನೀರಾವರಿಯು ಪ್ರಾಚೀನ ಕಾಲದ ಬಳಸುತ್ತಿರುವ ನೀರಾವರಿಯಾಗಿದೆ. ಸಮವಾಗಿ ಇರುವ ಭೂ ಪ್ರದೇಶದಲ್ಲಿ ಭೂಮಿಯನ್ನು ಉಳುಮೆ ಮಾಡಿ ಸಣ್ಣ ಕಾಲುವೆ ಮೂಲಕ ಬಾವಿ ಅಥವಾ ಕೊಳವೆ ಬಾವಿಯಿಂದ ಅಥವಾ ನೀರಿನಯಾವುದೇ ಮೂಲವನ್ನು ಉಪಯೋಗಿಸಿ ನೀರು ಬಿಡುವ ವ್ಯವಸ್ಥೆಗೆ ಸಾಂಪ್ರದಾಯಿಕ ನೀರಾವರಿ ಎಂದು ಕರೆಯುತ್ತಾರೆ. ಅಥಣಿ ತಾಲೂಕಿನಲ್ಲಿ ಇರುವ ರೈತರು ತಮ್ಮ ಮನೆಯಲ್ಲಿ ಇರುವ ಮಟ್ಟಿ ಹೊಡೆಯುವ ಮೂಲಕ (ಎತ್ತುಗಳ ಸಹಾಯದಿಂದ ಬಾವಿಯಲ್ಲಿ ಇರುವ ನೀರನ್ನು ಕಬ್ಬಿನದ ಡಬ್ಬಿ ಉಪಯೋಗಿಸಿ ನೀರು ಮೇಲೆ ಎತ್ತುವ ಸಾದನಕ್ಕೆ ಮಟ್ಟಿ ಹೊಡೆಯುವದು ಎಂದು ಕರೆಯುತ್ತಾರೆ) ನೀರಾವರಿ ಮಾಡುತ್ತಿದ್ದರು. ಈ ಅಭಿವೃದ್ಧಿ ಯುಗದಲ್ಲಿ ವಿದ್ಯುತ್ ಶಕ್ತಿ ಉಪಯೋಗಿಸಿ ನೀರನ್ನು ಮೇಲೆತ್ತಿ ಈ ನೀರಾವರಿ ಪದ್ದತಿಯನ್ನು ಬಳಸಿಕೊಂಡು ಅಭಿವೃದ್ಧಿ ಹೊಂದುತ್ತಿದ್ದಾರೆ.

**ಸಂಪ್ರದಾಯಿಕ ನೀರಾವರಿಯ ಅನೂಕೂಲತೆಗಳು.**

❖ ಉದ್ಯೋಗ ದೊರೆಯುವ ನೀರಾವರಿಯಾಗಿದೆ.

❖ ಬೆಳೆಗಳ ಸುತ್ತ ಮುತ್ತಲಿನ ಪ್ರದೇಶ ಯಾವಾಗಲು ತಂಪಾಗಿರುತ್ತದೆ.

❖ ಬೆಳೆಯ ಸುತ್ತ ಬೆಳೆಯುವ ಕೆಲವು ಸಸಿಗಳಿಂದ ಪ್ರಾಣಿ ಸಂತತಿ ವೃದ್ಧಿಯಾಗುತ್ತದೆ.

❖ ಅತೀ ಕಡಿಮೆ ವೆಚ್ಚ ಹೊಂದ್ದಿರುವ ನೀರಾವರಿಯಾಗಿದೆ.

❖ ಎಲ್ಲಾ ರೀತಿಯ ಬೆಳೆಗಳನ್ನು ಬೆಳೆಯಲ್ಲು ಸಾದ್ಯವಾಗುತ್ತದೆ.

❖ ಸಾಕಷ್ಟು ನೀರು ಮಣ್ಣಿನೊಳಗೆ ಇಳಿಯುವಂತೆ ಮಾಡುತ್ತದೆ.

❖ ಈ ನೀರಾವರಿ ಪದ್ದತಿ ಬಳಸುವ ಜೋತೆಗೆ ಹೈನುಗಾರಿಕೆ, ಪ್ರಾಣಿ ಸಾಕಾಣಿಕೆ ಮಾಡಬಹುದು.

**ಮಲಚಿಂಗ್ ಪೇಪರ ನೀರಾವರಿ.**

ಈ ಮೇಲಿನ ಎಲ್ಲಾ ನೀರಾವರಿ ಪದ್ಧತಿಯಲ್ಲಿ ವಿಭಿನ್ನವಾದ ನೀರಾವರಿ ಪದ್ಧತಿ ಎಂದರೆ ಮಲಚಿಂಗ್ ಪೇಪರ ನೀರಾವರಿ ಪದ್ಧತಿ ಎಂದು ಹೆಳಬಹುದು ಎಕೆಂದರೆ. ಈ ನೀರಾವರಿ ಪದ್ಧತಿಯಲ್ಲಿ ಸಾಗುವಳಿ ಮಾಡುವ ಭೂಮಿಯಲ್ಲಿ ಭೋದುಗಳನ್ನು ತಯಾರಿಸಿ. ಬೋದುಗಳಲ್ಲಿ

ನಾವು ಬೆಳೆಯುವ ಬೆಳೆಯ ಬೀಜಗಳನ್ನು ಹಾಕಿ ಅದರ ಜೋತೆಗೆ ನೀರಿನ ಸರಬರಾಜು ಮಾಡಲು ಪಿವಿಸಿ ಪೈಪುಗಳನ್ನು ಹಾಕಿ ಬೋದುಗಳನ್ನು ಸರಿಯಾಗಿ ತಯಾರಿಸಿ ಆ ಬೋದುಗಳ ಮೇಲೆ ಮಲಚಿಂಗ್ ಪಾಸ್ಟಿಕ ಪೇಪರನ್ನು ಹೊದಿಕೆ ಮಾಡಿ. ಆ ಪಾಸ್ಟಿಕ ಪೇಪರಗೆ ನಾವು ಹಾಕಿದ ಬೀಜ ಗುರುತಿಸಿ ಆ ಜಾಗೆಯಲ್ಲಿ ಪೇಪರಗೆ ರಂಧ್ರ ಮಾಡಬೇಕು ಆ ಹೋಲಿನಿಂದ ಸರಿಯಾಗಿ ಬೀಜ ಮೋಳಕೆ ವಡೆಯುವ ವ್ಯವಸ್ಥೆ ಹೊಂದಿರಬೇಕು. ಈ ವ್ಯವಸ್ಥೆಯಿಂದ ನೀರಿನ ಪ್ರಮಾಣ ಕಡಿಮೆ ಬಳಕೆಯ ಜೊತೆಗೆ. ಬೆಳೆಯ ಸಸಿಯ ಜೊತೆಗೆ ಬೆಳೆಯುವ ಇತರೆ ಸಸಿಗಳ ಸಂಖ್ಯೆ ಕಡಿಮೆಯಾಗಿ ಮಾಡಿದ ಬೆಳೆ ಹೆಚ್ಚಿನ ಪ್ರಮಾಣದಲ್ಲಿ ಬೆಳೆದು ಹೆಚ್ಚಿನ ಆದಾಯಕ್ಕೆ ಸಹಕಾರಿಯಾಗುತ್ತದೆ.

**ಮಲಚಿಂಗ್ ಪೇಪರ ನೀರಾವರಿಯ ಅನೂಕೂಲತೆಗಳು.**

- ಅಧಿಕ ಉತ್ಪಾದಕತೆ ಸಹಕಾರಿ
- ಇಳುವರಿಯನ್ನು ಸುಧಾರಿಸುತ್ತದೆ.
- ಬೆಳೆಗಳ ಸುತ್ತ ಮುತ್ತಲಿನ ಪ್ರದೇಶ ಯಾವಾಗಲು ತಂಪಾಗಿರುತ್ತದೆ
- ಕಳೆಯ ಬೆಳವಣಿಗೆ ಕಡಿಮೆಯಾಗುತ್ತದೆ.
- ಕೂಲಿಯ ಉಳಿತಾಯವಾಗುತ್ತದೆ.
- ನೀರಿನ ಬಳಕೆಯನ್ನು ಶೇಕಡಾ ೫೦ ರಿಂದ ೬೦ ರಷ್ಟು ಕಡಿಮೆ ಮಾಡುತ್ತದೆ.
- ನೀರು ವ್ಯರ್ಥವಾಗುವದಿಲ್ಲ
- ಗಿಡದ ಬೇರುಗಳ ಹತ್ತಿರ ಸತತವಾಗಿ ತಂಪಾದ ಸ್ಥಳವನ್ನಾಗಿ ಇರಿಸಬಹುದು.
- ನೀರಿನ ನಷ್ಟವನ್ನು ತಡೆಗಟ್ಟುತ್ತದೆ.

**೨. ಸಣ್ಣ ನೀರಾವರಿಯ ಅನೂಕೂಲತೆಗಳು**

ರಾಜ್ಯದಲ್ಲಿ ಇರುವ ಕೃಷಿಗೆ ಹಲವಾರು ನೀರಾವರಿ ಪದ್ಧತಿಗಳನ್ನು ಆರಿಸಿಕೊಂಡರು ಈ ನೀರಾವರಿಯಲ್ಲಿ ಬರುವ ಅನೂಕೂಲತೆಗಳನ್ನು ಈ ಕೆಳಗಿನಂತೆ ತಿಳಿಯಬಹುದು.

- ಭಾರತದಲ್ಲಿ ಮಳೆ ಅನಿಶ್ಚಿತವಾಗಿರುವದರಿಂದ ಅತಿವೃಷ್ಟಿ ಅನಾವೃಷ್ಟಿ ಉಂಟಾಗುತ್ತದೆ.
- ಭಾರತದ ವಿವಿಧ ರಾಜ್ಯಗಳಲ್ಲಿ ಮಳೆ ಒಂದೇ ಪ್ರಮಾಣದಲ್ಲಿ ಆಗುವದಿಲ್ಲ.
- ಮಳೆಯ ವಾರ್ಷಿಕ ವಿತರಣೆಯಲ್ಲಿ ಅಸಮಾನತೆಯಿದೆ.
- ಮುಂಗಾರು ಬೆಳೆಗಳಿಗೆ ಮಳೆಯ ನೀರು ಸಾಕಾಗುವದಿಲ್ಲ.
- ಮಳೆಯಿಂದಾಗಿ ಭೂಸವಕಳಿ ಉಂಟಾಗಿತ್ತದೆ.

- ❖ ಭಾರತದಲ್ಲಿ ಅನೇಕ ನದಿಗಳು ಹರಿಯುವದರಿಂದ ನದಿಗಳ ನೀರು ವ್ಯರ್ಥವಾಗಿ ಸಮುದ್ರ ಸೇರುವ ಬದಲು ನೀರಾವರಿಗೆ ಬಳಸಿಕೊಳ್ಳಲಾಗುವದು.
- ❖ ಒಣ ಭೂಮಿಯನ್ನು ಕೃಷಿಯೋಗ್ಯ ಭೂಮಿಯನ್ನಾಗಿ ಮಾಡುತ್ತದೆ.
- ❖ ನೀರಾವರಿ ಸೌಲಭ್ಯದಿಂದ ಬಹು ಬೆಳೆಯ ಪದ್ಧತಿಗೆ ಅವಕಾಶ ಒದಗಿಸುತ್ತದೆ.
- ❖ ಹಳಿಯ ಅಭಿವೃದ್ಧಿಗೆ ಸಹಾಯ ಮಾಡುತ್ತದೆ.
- ❖ ಸರಕಾರಕ್ಕೆ ನೀರಾವರಿಯಿಂದ ಆದಾಯ ಬರುತ್ತದೆ.
- ❖ ಹಳ್ಳಿಯ ಜನರಿಗೆ ಉದ್ಯೋಗಾವಕಾಶಗಳನ್ನು ಒದಗಿಸುತ್ತದೆ.
- ❖ ವಿವಿಧೋದ್ಧೇಶ ನೀರಾವರಿ ಯೋಜನೆಗಳು ಕೃಷಿಗೆ ಮಾತ್ರವಲ್ಲದೆ ಕೈಗಾರಿಕೆಗಳಿಗೆ, ಜಲಸಾರಿಗೆಗೆ ಮತ್ತು ಮೀನುಗಾರಿಕೆಗೆ ಸಹಾಯಕವಾಗಿವೆ.

ಈ ಎಲ್ಲಾ ಅನೂಕೂಲತೆಗಳಿಂದ ಭಾರತ ದೇಶದಲ್ಲಿ ಇರುವ ರೈತರು "ಭೂಮಿಗಿಂತಲೂ ನೀರು ಬೆಲೆ ಯುಳ್ಳದ್ದು" ಎಂಬ ಮಾತನ್ನು ಹೆಳುತ್ತಾರೆ.

**೩. ಸಣ್ಣ ನೀರಾವರಿಯ ಅನಾನುಕೂಲತೆಗಳು**

ರಾಜ್ಯದ ಕೃಷಿಯು ಮಳೆಯೊಡನೆ ಆಡುವ ಜೂಜು ಎಂದು ಕರೆಸಿಕೊಂಡಿದೆ. ಮಳೆಯು ಅಸಮರ್ಪಕ, ಅನಿಶ್ಚಿತ, ಅಕಾಲಿಕ, ಅನಿಯಮಿತ ಆಗಿರುವದರಿಂದ ನೀರಾವರಿ ಕರ್ನಾಟಕ ರಾಜ್ಯದಲ್ಲಿ ನೀರಾವರಿ ಕ್ಷೇತ್ರದಲ್ಲಿ ಕಳೆದ ಐದೂವರೆ ದಶಕಗಳ ಕಾಲಾವಧಿಯಲ್ಲಿ ಸಾಕಷ್ಟು ಪ್ರಗತಿ ಸಾಧಿಸಲಾಗಿದೆ. ಆದರೂ ರಾಜ್ಯದ ಹೆಚ್ಚಿನ ಕೃಷಿ ಜಮೀನು ಮಳೆ ಅವಲಂಬಿತವಾಗಿಯೇ ಇದೆ. ರಾಜ್ಯದಲ್ಲಿ ನೀರಾವರಿಯನ್ನು ಇನ್ನೂ ಅಭಿವೃದ್ದಿಪಡಿಸಿ ಪೂರ್ಣ ಸಾಮರ್ಥ್ಯವನ್ನು ಬಳಸಿಕೊಳ್ಳಬೇಕಾದ ಅನಿವಾರ್ಯತೆ ಇದೆ. ಕರ್ನಾಟಕ ರಾಜ್ಯ ಸರಕಾರವು ರಾಜ್ಯದಲ್ಲಿ ನೀರಾವರಿ ವಿಸ್ತರಣೆಗಾಗಿ ಹಲವಾರು ಯೋಜನೆಗಳನ್ನು ಹಮ್ಮಿಕೊಂಡಿದೆ. ಈ ಯೋಜನೆಗೆ ಭಾರೀ ಬಂಡವಾಳವನ್ನು ಹೂಡುತ್ತಿದೆ. ಆದರು ಸಣ್ಣ ನೀರಾವರಿ ಕ್ಷೇತ್ರವೂ ಎದುರಿಸುತ್ತಿರುವ ಸಮಸ್ಯೆಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದು.

೧ ನೀರು ಅಲ್ಲಲ್ಲಿ ನಿಂತು ವ್ಯರ್ಥವಾಗಿ ಹೊಗಬಹುದು.

೨ ನೀರಾವರಿ ಯೋಜನೆಗಳಿಂದ ಅರಣ್ಯಗಳು ನಾಶವಾಗುತ್ತವೆ.

೩ ನೀರಾವರಿ ಯೋಜನೆಗಳಿಂದ ಹೆಚ್ಚಿನ ಭೂಮಿ ಮುಳುಗಡೆಯಾಗಿತ್ತದೆ.

೪ ಮಳೆಗಾಲದಲ್ಲಿ ನೀರು ಹಿಡಿಯವ ಸಮಸ್ಯೆಯಾಗುತ್ತವೆ.

೫ ನೀರಾವರಿ ಯೋಜನೆಗಳಿಗಾಗಿ ಸರಕಾರ ಅಪಾರ ಹಣ ವೆಚ್ಚ ಮಾಡಬೇಕಾಗುತ್ತದೆ.

೬ ನೀರಾವರಿ ಯೋಜನೆಗಳಿಂದ ಕೃಷಿ ಕ್ರಮವನ್ನು ಬದಲಾಯಿಸುತ್ತದೆ.

೭ ನಿರುದ್ಯೋಗದ ಸಮಸ್ಯೆ ಉಂಟಾಗುತ್ತದೆ.

೮ ಹೆಚ್ಚಿನ ವೆಚ್ಚ ಮಾಡಬೇಕಾಗುತ್ತದೆ.

೯ ಎಲ್ಲ ಕಡೆ ಈ ನೀರಾವರಿ ವ್ಯವಸ್ಥೆ ಮಾಡಲು ಸಾದ್ಯವಿಲ್ಲ.

೧೦ ಪ್ರಾಣಿಗಳ ಸಂಖ್ಯೆ ಕಡಿಮೆ ಯಾಗುತ್ತದೆ.

೧೧ ಹುಲ್ಲಿನ ಅವಶೇಶಗಳು ಉಳಿಯುವದಿಲ್ಲ.

೧೨ ನೀರಾವರಿಯಲ್ಲಿ ಪ್ಲಾಸ್ಟಿಕ ಬಳಕೆಯಿಂದ ಇಳುವರಿ ಕಡಿಮೆಯಾಗಿತ್ತದೆ.

**೪. ಸಣ್ಣ ನೀರಾವರಿಗೆ ಸರಕಾರದ ಅಭಿವೃದ್ಧಿ ಯೋಜನೆಗಳು.**

ರಾಷ್ಟ್ರದ ಅಭಿವೃದ್ಧಿಗೆ ಮೂಲ ಮಂತ್ರವಾಗಿರುವ. "ಗ್ರಾಮಗಳ ಅಭಿವೃದ್ಧಿಯೆ ರಾಷ್ಟ್ರದ ಅಭಿವೃದ್ಧಿ" ಎಂದು ಹೇಳಿದ ಬಾಪೂಜಿಯವರ ಮಾತಿನಂತೆ ರಾಷ್ಟ್ರದ ಅಭಿವೃದ್ಧಿಗೆ ಬೇಕಾದ ಯೋಜನೆ ರಾಷ್ಟ್ರದ ಅಭಿವೃದ್ಧಿ ಯೋಜನೆಗಳಾಗಿ ರಾಜ್ಯದ ಅಭಿವೃದ್ಧಿಗೆ ಬೇಕಾಗುವ ಅಭಿವೃದ್ಧಿ ಯೋಜನೆ ರಾಜ್ಯ ಯೋಜನೆಗಳಾಗಿವೆ ಈ ಯೋಜನೆಗಳನ್ನು ಈ ಕೆಳಗಿನಂತೆ ನಾವು ತಿಳಿಯಬಹುದು.[೧೫]

**ಅ. ಕೇಂದ್ರ ಪುರಸ್ಕೃತ ಯೋಜನೆಗಳು**

**ಆ. ರಾಜ್ಯ ಯೋಜನೆಗಳು**

**ಇ. ವಲಯ ಯೋಜನೆಗಳು**

ಈ ಮೇಲಿನ ಎಲ್ಲಾ ಯೋಜನೆಗಳ ಸಂಕ್ಷಿಪ್ತ ಮಾಹಿತಿ ಈ ಕೆಳಗಿನಂತಿದೆ.

**ಅ. ಕೇಂದ್ರ ಪುರಸ್ಕೃತ ಯೋಜನೆಗಳು.**

**೧. ಭಾರತ ಸರ್ಕಾರದ ನೆರವಿನ ಜಲ ಕಾಯಗಳ ದುರುಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಮಾಡುವ ಯೋಜನೆ (ಆರ್.ಆರ್.ಆರ್.)**

ಈ ಹಿಂದೆ ೨೦೦೬-೦೮ನೇ ಸಾಲುಗಳಲ್ಲಿ ಬೆಂಗಳೂರು ಗ್ರಾಮಾಂತರ ಹಾಗೂ ಗುಲ್ಬರ್ಗಾ ಜಿಲ್ಲೆಗಳಲ್ಲಿ ಭಾರತ ಸರ್ಕಾರದ ಅನುಮೋದನೆಯೊಂದಿಗೆ ಅನುಷ್ಠಾನಗೊಳಿಸಿರುವ ವ್ಯವಸಾಯಕ್ಕೆ ನೇರವಾಗಿ ಸಂಬಂಧಿಸಿದ ಜಲ ಕಾಯಗಳ ದುರಸ್ತಿ, ಜೀರ್ಣೋದ್ಧಾರ ಮತ್ತು ಪುರುಜ್ಜೀವನಗೊಳಿಸುವ (RRR) ಪ್ರಾಯೋಗಿಕ ಯೋಜನೆಯ ಫಲಶೃತಿಯನ್ನು ಆಧರಿಸಿ ಹಾಗೂ ಜಲಕಾಯಗಳಿಂದ ಲಭ್ಯವಾಗುವ ಪ್ರಯೋಜನೆಗಳನ್ನು ಹೆಚ್ಚಿಸುವ ಅವಶಕತೆಯನ್ನು ಗಮನದಲ್ಲಿರಿಸಿಕೊಂಡು ಭಾರತ ಸರ್ಕಾರದ ಜಲ ಸಂಪನ್ಮೂಲ ಸಚಿವಾಲಯವು ರಾಷ್ಟ್ರಾದ್ಯಂತ ಅನ್ವಯವಾಗುವಂತೆ ಮೆಲ್ಕಂಡ ಯೋಜನೆಗೆ ಅನುಮೋದನೆ ನೀಡಿದೆ. ಈ ಯೋಜನೆಯನ್ನು "National Project for Repair, Renovation and Restoration of Water Bodies with domestic support" ಎಂದು ಅನುಷ್ಠಾನಗೊಳಿಸಲು ಮಂಜುರಾತಿ ಪಡೆದು ೨೦೧೦-೧೧ ರಿಂದ ೨೦೧೨-೧೩ ನೇ ಸಾಲುಗಳಲ್ಲಿ ಅನುಷ್ಠಾನಗೊಳಿಸಲಾಗಿದೆ.

---

೧೫. ' ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) – ವಾರ್ಷಿಕ ವರದಿ ೨೦೧೩-೧೪ ಪುಟ ಸಂಖ್ಯೆ – ೫,೯,೧೯.

ಈ ಕಾರ್ಯಕ್ರಮದಡಿ ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್‌ರಾಜ್ ಇಲಾಖೆಯ ೫೩ ಕೆರೆಗಳು ಸೇರಿದಂತೆ ಒಡ್ಡು ೪೨೭ ಕೆರೆಗಳ ಅಭಿವೃದ್ಧಿ ಕಾರ್ಯವನ್ನು ರೂಪಾಯಿ ೨೩೨.೭೮ ಕೋಟಿ ಅಂದಾಜು ವೆಚ್ಚದಲ್ಲಿ (ಶೇಕಡಾ ೧೦%ರಷ್ಟು ವೆಚ್ಚವನ್ನು ಮಹಾತ್ಮ ಗಾಂಧಿ ಉದ್ಯೋಗ ಖಾತರಿ ಯೋಜನೆಯ ಅನುದಾನದಿಂದ ಭರಿಸುವುದು ಸೇರಿದಂತೆ) ೨೦೧೦-೧೧ನೇ ಸಾಲಿನಿಂದ ಅನುಷ್ಠಾನಗೊಳಿಸಲಾಗಿದೆ. ಇಲ್ಲಿಯವರೆಗೆ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಭಾಗದ ಕೆಲಸ ಹೊರತು ಪಡಿಸಿ ೪೨೪ ಕಾಮಗಾರಿಗಳು ಪೂರ್ಣಗೊಂಡಿವೆ. ಉಳಿದ ೨ ಕಾಮಗಾರಿಗಳನ್ನು ರೈತರ ಆಕ್ಷೇಪಣೆಗಳಿಂದದಾಗಿ ಹಾಗೂ ೧ ಕಾಮಗಾರಿಗಯನ್ನು ಇತರ ಯೋಜನೆಯಡಿ ಕೈಗೊಂಡಿದ್ದರಿಂದ ಕೈಬಿಡಲಾಗಿದೆ. ನಂತರ ಯಾವುದೇ ಹೊಸ ಕಾಮಗಾರಿಗಳಿಗೆ ಅನುಮೋದನೆ ದೊರಕಿರುವುದಿಲ್ಲ. ೨೦೧೩-೧೪ನೇ ಸಾಲಿನಲ್ಲಿ ಬಾಕಿ ಬಿಲ್ಲುಗಳ ಪಾವತಿಗಾಗಿ ರೂಪಾಯಿ. ೨೦೦೦.೦೦ ಲಕ್ಷ ಅನುದಾನದ ಎದುರಾಗಿ ರೂಪಾಯಿ ೪೧೧.೬೧ ಲಕ್ಷ ಮಾಡಲಾಗಿದೆ.

**೨. ೧೩ನೇ ಆರ್ಥಿಕ ಆಯೋಗದ ಅನುದಾನ ಕೃಷಿಗೆ ನೇರವಾಗಿ ಸಂಬಂಧಿಸಿದ ಕೆರೆ ನೀರಾವರಿ ಯೋಜನೆಗಳ ಜೀರ್ಣೋದ್ಧಾರ.**

ಈ ಕಾರ್ಯಕ್ರಮದಡಿಯಲ್ಲಿ ಕೆರೆ ಹಾಗೂ ಪಾರಂಪರೊಕ ಜಲಕಾಯಗಳ ಪುನರುಜ್ಜೀವನ ಕಾರ್ಯವನ್ನು ೩ ಆರ್ಥಿಕ ವರ್ಷಗಳಿಗೆ ಮಂಜುರಾತಿ ನೀಡಿ ನಾಲ್ಕು ಆರ್ಥಿಕ ವರ್ಷಗಳ ಅವಧಿಯಲ್ಲಿ ಅಚಿದರೆ ೨೧೦೦-೧೨ ರಿಂದ ೧೦೧೪-೧೫ ರಲ್ಲಿ ಅನುಷ್ಟಾನಗೊಳಿಸಲಾಗುತ್ತಿದೆ. ಈ ಯೋಜನೆಗೆ ಭಾರತ ಸರ್ಕಾರವು ಪೂರ್ಣ ಮೊತ್ತವನ್ನು ಅನುದಾನದ ರೂಪದಲ್ಲಿ ನೀಡಲಿದೆ. ಒಟ್ಟು ರೂಪಾಯಿ. ೩೫೦.೦೦ ಕೋಟಿ ಅಂದಾಜು ಮೊತ್ತದಲ್ಲಿ ೬೩೧ ಕಾಮಗಾರಿಗಳ ಕ್ರಿಯಾ ಯೋಜನೆಗೆ, ಈ ಯೋಜನೆಯ ಅನುಷ್ಟಾನಕ್ಕಾಗಿ ರಚಿಲಾಗಿರುವ ಅಧಿಕಾಯುಕ್ತ ಸಮಿತಿಯ ಅನುಮೋದನೆಯೊಂದಿಗೆ ಸರ್ಕಾರದ ಆದೇಶ ಸಂಖ್ಯೆಸನೀಇ ೧೦೮ ಮಸಾವಿ ೨೦೧೦ ದಿನಾಂಕ: ೨೮-೦೯-೨೦೧೧ ರಲ್ಲಿ ಅನುಮೋದನೆ ನೀಡಲಾಗಿದೆ. ಈ ಕಾರ್ಯಮವನ್ನು ೨೦೧೧-೧೨ನೇ ಸಾಲಿನಿಂದ ಅನುಷ್ಟಾನಗೊಳಿಸಲಾಗುತ್ತಿದೆ. ೨೦೧೧-೧೨ನೇ ಸಾಲಿನಲ್ಲಿ ರೂಪಾಯಿ ೧೭೧೮.೦೦ ಲಕ್ಷ ವೆಚ್ಚವಾಗಿದೆ. ೨೦೧೨-೧೩ನೇ ಸಾಲಿನಲ್ಲಿ ರೂಪಾಯಿ ೧೩೧೬೩.೭೪ ಲಕ್ಷ ಅನುದಾನವನು ಒದಗಿಸಲಾಗಿತ್ತ. ಇದರ ಎದುರಾಗಿ ರೂಪಾಯಿ ೧೨,೯೭೭.೪೯ ಲಕ್ಷ ವೇಚ್ಚ ಮಾಡಲಾಗಿದೆ. ೨೦೧೩-೧೪ನೇ ಸಾಲಿನಲ್ಲಿ ರೂಪಾಯಿ ೮೭೫೦.೦೦ಲಕ್ಷ ಅನುದಾನವನ್ನು ಒದಗಿಸಲಾಗಿತ್ತು. ಇದರ ಎದುರಾಗಿ ರೂ೮೭೪೮೦.೭೦ ಲಕ್ಷ ವೆಚ್ಚ ಮಾಡಲಾಗಿದೆ. ಈ ಯೋಜನೆ ಅಡಿ ೨೦೧೩-೧೪ ರಲ್ಲಿ ೬೭೭೩ ಹೆಕ್ಟೇರ್ ನೀರಾವರಿ ಸೌಲಭ್ಯ ಸ್ಥಿರೀಕರಿಸುವ ವಾರ್ಷಿಕ ಗುರಿಯ ಎದುರಿಗಿ ೮೩೦೦ ಹೆಕ್ಟೇರ್ ಪ್ರದೇಶದಲ್ಲಿ ನೀರಾವರಿ ಸೌಲಭ್ಯ ಸ್ಥಿರೀಕರಿಸಲಾಗಿದೆ.

## ೩. ಭಾರತ ಸರ್ಕಾರಸ ತ್ವರಿತ ನೀರಾವರಿ ಸೌಲಭ್ಯ ಕಲ್ಪಿಸುವ ಕಾರ್ಯಕ್ರಮ (ಎ.ಐ.ಬಿ.ಪಿ) – ಪ್ರಧಾನ ಕಾಮಗಾರಿಗಳು

ತ್ವರಿತ ನೀರಾವರಿ ಸೌಲಭ್ಯ ಕಲ್ಪಿಸುವ ಕಾರ್ಯಕ್ರಮ (Accelerated Irrigation Benefit Programme) ದಡಿ ೨೦೦೯-೧೦ನೇ ಸಾಲಿನಿಂದ ಭಾರತ ಸರ್ಕಾರದ ಅನುಮೋದನೆ ಪಡೆದು ಕಾಮಗಾರಿಗಳನ್ನು ಅನುಷ್ಠಾನಗೊಳಿತ್ತಿದ್ದ, ಪ್ರಸ್ತುತ ಕೆಳಕಂಡ ಮಾರ್ಗಸೂಚಿಯಂತೆ ಈ ಕಾರ್ಯಕ್ರಮಕ್ಕೆ ಕಾರ್ಯಕ್ರಮಕ್ಕೆ ಕಾಮಗಾರಿಗಳನ್ನು ಪ್ರಸ್ತಾಪಿಸಬಹುದಾಗಿದೆ.

- ❖ ಕರ್ನಾಟಕ ರಾಜ್ಯವು ವಿಶೇಷವಲ್ಲದ ಪ್ರವರ್ಗ (Non Special Category) ಪಟ್ಟಿಯಲ್ಲಿ ಸೇರಿದೆ.
- ❖ ಗಿರಿಜನ ಪ್ರದೇಶ ಮತ್ತು ಬರಪೀಡಿತ ಪ್ರದೇಶಾವೃದ್ಧಿ ಕಾರ್ಯಕ್ರಮ ಹಾಗೂ ಮರು ಭೂಮಿ ಅಭಿವೃದ್ಧಿ ಕಾರ್ಯಕ್ರಮ ಪಟ್ಟಿಯಲ್ಲಿ ಸೇರಿರುವ ತಾಲೂಕುಗಳಲ್ಲಿ ೨೦ ಹೆಕ್ಟೇರ್ ಹಾಗೂ ಹೆಚ್ಚು ಅಚ್ಚುಕಟ್ಟು ಹೊಂದಿರುವ ಸಣ್ಣ ನೀರಾವರಿ ಯೋಜನೆಗಳನ್ನು ಎ.ಐ.ಬಿ.ಪಿ ಯೋಜನೆಯಡಿ ಪ್ರಸ್ತಾಪಿಸ ಬಹುದಾಗಿದೆ.
- ❖ ಪ್ರತಿ ಹೆಕ್ಟೇರ್ ರೂ. ೨.೫೦ ಲಕ್ಷದವರೆಗೆ ವೆಚ್ಚ ತಗಲುವ ಯೋಜನೆಗಳನ್ನು ಈ ಕಾರ್ಯಕ್ರಮದಡಿ ಪ್ರಸ್ತಾಪಿಸಬಹುದಾಗಿದೆ.
- ❖ ಯೋಜನಾ ಆಯೋಗದ ಸಹಮತಿಯೊಂದಿಗೆ ಈ ಯೋಜನೆಗಳನ್ನು ಕೈಗೊಳ್ಳಲಾಗುವುದು.
- ❖ ಈ ಕಾರ್ಯಕ್ರಮದಡಿ ಅನುದಾನವನ್ನು ನೀಡುವುದು ಹಾಗೂ ಉಳಿದ ಶೇಕಡ ೨೫% ರಷ್ಟು ವೆಚ್ಚವನ್ನು ರಾಜ್ಯ ಸರ್ಕಾರದ ಪಾಲಾಗಿರುತ್ತದೆ.
- ❖ ಭಾರತ ಸರ್ಕಾರವು ಶೇಕಡ ೭೫ ರಷ್ಟು ಅನುದಾನವನ್ನು ನೀಡುವುದು ಹಾಗೂ ಉಳಿದ ಶೇಕಡ ೨೫ ರಷ್ಟು ವೆಚ್ಚವನ್ನು ರಾಜ್ಯ ಸರ್ಕಾದ ಪಾಲಗಿರುತ್ತದೆ.

ಸಣ್ಣ ನೀರಾವರಿ ಇಲಾಖೆಯು ೨೦೦೯-೧೦ನೇ ಸಾಲಿನಿಂದ ಇಲ್ಲಿಯವರೆಗೆ ೧೦ ಹಂತಗಳಲ್ಲಿ (೯ನೇ ಹಂತ ೨ ಭಾಗಗಳಲ್ಲಿ) ರೂ ೯೬೫.೮೨ ಕೋಟಿ ಬಾಕಿ ಅಂದಾಜು ಮತ್ತದ ೭೫೬ ಸಣ್ಣ ನೀರಾವರಿ ಕಾಮಗಾರಿಗಳಿಗೆ ಭಾರತ ಸರ್ಕಾದ ಅನುಮೊದನೆ ಪಡೆದು ಅನುಷ್ಠಾನಗೊಳಿಸುತ್ತದೆ. ಇದುವರೆಗೆ ಮೊದಲನೇ ೭ ಹಂತದಲದಲ್ಲಿ ಅನುಮೊದನೆ ದೊರಕ್ಕಿದ್ದ ೪೮೯ ಕಾಮಗಾರಿಗಳನ್ನು ಪೂರ್ಣಗೊಳಿಸಿಸಿ ೩೯೯೭೫ ಹೆಕ್ಟೇರ್ ಪ್ರದೇಶದಲ್ಲಿ ಹೊಸದಾಗಿ ನೀರಾವರಿ ಸೌಲಭ್ಯ ಸೃಷ್ಟಿಸಲಾಗಿದೆ. ೨೦೧೩-೧೪ ನೇ ಸಾಲಿನಲ್ಲಿ ಈ ಕಾರ್ಯಕ್ರಮಕ್ಕೆ ಒಟ್ಟು ರೂಪಾಯಿ ೨೦,೦೦೦.೦೦ ಲಕ್ಷ ಅನುದಾನವನ್ನು ಒದಗಿಸದ್ದು, ಇದರ ಎದುರಾಗಿ ರೂಪಾಯಿ ೧೪,೮೯೭.೪೬ ಲಕ್ಷ ವೆಚ್ಚ ಮಾಡಲಾಗಿದೆ. ಈ ಯೋಜನೆ ಅಡಿ ೨೦೧೩-೧೪ರಲ್ಲಿ ೧೦,೯೯೧ ಹೆಕ್ಟೇರ್ ಹೊಸ ಅಚ್ಚುಕಟ್ಟು ಸೃಷ್ಟಿಸುವ ವಾರ್ಷಿಕ ಗುರಿ ಎದುರಾಗಿ ೧೨,೭೧೩ ಹೆಕ್ಟೇರ್‌ಗಳ

ಹೊಸ ಅಚ್ಚುಕಟ್ಟು ಸೃಷ್ಟಸಲಾಗಿದೆ. ಜನವರಿ ಮತ್ತು ಫೆಬ್ರವರಿ ೨೦೧೪ ರಲ್ಲಿ ೮ ರಿಂದ ೧೦ ನೇ ಹಂತಗಳಲ್ಲಿ ಒಟ್ಟು ೨೮೬.೭೮ ಕೋಟಿ ಬಾಕಿ ಅಂದಾಜು ಮೊತ್ತದ ೨೬೭ ಕಾಮಗಾರಿಗಳನ್ನು ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ಪಡೆಯಲಾಗಿದೆ. ಮೇಲ್ಕಂಡ ಎಲ್ಲ ರಾಜ್ಯ ಹಾಗೂ ಕೇಂದ್ರ ಪುರಸ್ಕೃತ ಯೋಜನೆಗಳಿಂದ ೨೦೧೩-೧೪ನೆ ಸಾಲಿನಲ್ಲಿ ಒಟ್ಟು ೩೭,೭೯೦ ಹೆಕ್ಟೇರ್ ಹೊಸ ಅಚ್ಚುಕಟ್ಟನ್ನು ಸೃಷಟಿಸಲು ಮತ್ತು ೧೫,೯೧೦ ಹೆಕ್ಟೇರ್ ಪ್ರದೇಶದಲ್ಲಿ ನೀರಾವರಿ ಸೌಲಭ್ಯ ಸ್ಥಿರೀಕರಿಸುವ ಗುರಿ ಹಮ್ಮಿಕೊಂಡು ಇದರ ಎದುರಾಗಿ ಅನುಕ್ರಮವಾಗಿ ೩೬,೧೦೮ ಹೆಕ್ಟೇರ್ ಪ್ರದೇಶದಲ್ಲಿ ಹೊಸದಾಗಿ ನೀರಾವರಿ ಸೌಲಭ್ಯವನ್ನು ಸೃಷ್ಟಿಸಲಾಗಿದೆ ಮತ್ತು ೧೬,೬೬೯ ಹೆಕ್ಟೇರ್‌ಗಳ ಪ್ರದೇಶದಲ್ಲಿ ನೀರಾವರಿ ಸೌಲಭ್ಯವನ್ನು ಸ್ಥಿರೀಕರಿಸಲಾಗಿದೆ. ಹೊಸದಾಗಿ ಸೃಷ್ಟಿಯಾಗಿರುವ ೩೬,೧೦೮ ಹೆಕ್ಟೇರ್ ಪ್ರದೇಶದಲ್ಲಿ ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪಯೋಜನೆ ಅಡಿ ವೈಯಕ್ತಿಕ ಫಲಾನಿಭವಿಗಳಿಗೆ ನಿರ್ಮಿಸಿರುವ ಯೋಜನೆಗಳ ಅಚ್ಚುಕಟ್ಟು ಸಹ ಸೇರಿದೆ.

**ಆ. ರಾಜ್ಯ ಯೋಜನೆಗಳು**



**೧. ಹೊಸ ಕೆರೆಗಳ ನಿರ್ಮಾಣ ಮತ್ತು ಪಿಕಪ್‌ಗಳು.**

ಈ ಶೀರ್ಷಿಕೆಯಡಿ, ಹೊಸಕರೆಗಳನ್ನು ನೀರ್ಮಿಸಿ, ಮಳೆಗಾಲದಲ್ಲಿ ನೀರನ್ನು ಸಂಗ್ರಹಿಸಿ, ಈ ನೀರನ್ನು ಬೆಳೆಗಳಿಗೆ ಮಳೆ ಇಲ್ಲದ ಅಥವಾ ಮಳೆ ಅಭಾವವಿರುವ ಕಾಲದಲ್ಲಿ ಬಳಸಲಾಗುವುದು. ನದಿ ಮತ್ತು ತೊರೆಗಳಿಗೆ ಅಡ್ಡಲಾಗಿ ನಿರ್ಮಿಸಲಾದ ಮಣ್ಣಿನ ಏರಿಗಳ ಮೇಲ್ಭಾಗದಲ್ಲಿ ಮಳೆಗಾಲದಲ್ಲಿ ಸಂಗ್ರಹವಾಗುವ ನೀರನ್ನು ಬೆಳೆಗಳಿಗೆ ಮಳೆ ಇಲ್ಲದ ಅಥವಾ ಮಳೆ ನೀರಿನ ಕೊರತೆಯಿರುವ ಕಾಲದಲ್ಲಿ ಬಳಸಲಾಗುವುದು. ಶೇಖರಿಸಿದ ನೀರನ್ನು ಗುರುತ್ವಾಕರ್ಷಣಾ ಹರಿವಿನೊಂದಿಗೆ ಸಮರ್ಪಕವಾಗಿ ಜಮೀನುಗಳಿಗೆ ವಿತರಣೆ ಮಾಡುವ ಕಾರ್ಯದಲ್ಲಿ ಸಣ್ಣ ನೀರಾವರಿ ಇಲಾಖೆ ತೊಡಗಿದೆ. ಹೊಸ ಕೆರೆಗಳ ನಿರ್ಮಾಣವನ್ನು ನಬಾರ್ಡ್ ಮತ್ತು ರಾಜ್ಯದ ಅನುದಾನದಿಂದ ಅನುಷ್ಠಾನಗೊಳಿಸಲಾಗುತ್ತಿದೆ. ಈ ಲೆಕ್ಕ ಶೀರ್ಷಿಕೆಯಡಿಯಲ್ಲಿ ಅಂತರ್ಜಲ ಅಭಿವೃದ್ಧಿ ಪಡಿಸವ ಇಂಗಿ ಕೆರೆಗಳ ನಿರ್ಮಾಣವನ್ನು ಸಹಾ ಕೈಗೊಳ್ಳಲಾಗುತ್ತಿದ್ದು, ಇದರಿಂದ ಸುತ್ತಮುತ್ತಲಿನ ತೆರೆದ ಬಾವಿಗಳಲ್ಲಿ ಮತ್ತು ಕೊಳವೆ ಬಾವಿಗಳಲ್ಲಿ ನೀರಿನ ಮಟ್ಟವು ಏರಿಕೆಯಾಗಿ ಪರೋಕ್ಷವಾಗಿ ನೀರಾವರಿಗೆ ಉಪಯೋಗವಾಗುತ್ತದೆ.

**೨. ಕೆರೆಗಳ ಆಧುನಿಕರಣ.**

ಸಣ್ಣ ನೀರಾವರಿ ಇಲಾಖೆಯು ಕೆರೆಗಳ ಆಧುನಿಕರಣ ಕೆಲಸಗಳನ್ನು ಕೈಗೊಳ್ಳುತ್ತಿದ್ದು ಇದರಡಿಯಲ್ಲಿ ಏರಿಯನ್ನು ಬಲಪಡಿಸುವುದು, ಕೋಡಿಯ ದುರಸ್ಥಿ ಮತ್ತು ನಾಲೆಗಳ ಲೈನಿಂಗ್ ಇತ್ಯಾದಿ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ. ಈ ಶೀರ್ಷಿಕೆಯಡಿ ೨೦೧೩-೧೪ನೇ ಸಾಲಿನಲ್ಲಿ ಒದಗಿಸಿದ ಅನುದಾನದಲ್ಲಿ ಕೆರೆಗಳ ಹೂಳೆತ್ತುವದು (ಆಧುನಿಕರಣ) ಕೆರೆಗಳಲ್ಲಿ ತುಂಬಿದ ಹೂಳನ್ನು ಅಂದರೆ ಮಣ್ಣು, ಕೆಸರು, ರಾಡಿ, ಮೊದಲಾದವುಗಳನ್ನು ಕೆರೆಯಿಂದ

ಹೊರ ತೆಗೆಯುವದಕ್ಕೆ ಕೆರೆ ಆಧುನಿಕರಣ ಎಂದು ಕರೆಯುತ್ತಾರೆ. ಅಥಣಿ ತಾಲೂಕಿನಲ್ಲಿ ಇರುವ ಹಳೆಯ ಕೆರೆಗಳನ್ನು ಸಮೀಪದ ಗ್ರಾಮಸ್ಥರ ಸಹಾಯದಿಂದ ಕೆರೆಯ ಆಧುನಿಕರಣ ಸರಕಾರದ ಯೋಜನೆಯಾಗಿದೆ. ಇದರಿಂದ ಕೆರೆಯಲ್ಲಿ ನೀರಿನ ಸಂಗ್ರಹಣಾ ಸಾಮರ್ಥ್ಯ ಹೆಚ್ಚಾಗುತ್ತದೆ.

**೩. ಬ್ಯಾರೇಜು, ಅಣೆಕಟ್ಟುಗಳ ನೀರ್ಮಾಣ.**

ನದಿ, ಹಳ್ಳಿಗಳಿಗೆ ಅಡ್ಡಲಾಗಿ ಬಂದಾರಗಳನ್ನು, ಸೇತುವೆ ಸಹಿತ ಬಂದಾರಗಳನ್ನು, ಕಿಂಡಿ ಅಣೆಕಟ್ಟುಗಳನ್ನು ಉಪ್ಪು ನೀರು ತಡೆಗೋಡೆ ಅಣೆಕಟ್ಟುಗಳನ್ನು ನಿರ್ಮಿಸಿ ನೀರನ್ನು ಸಂಗ್ರಹಿಸುವ ಕಾಮಗಾರಿಗಳನ್ನು ಇಲಾಖೆಯು ಕೈಗೊಳ್ಳುತ್ತದೆ. ಹೀಗೆ ಸಂಗ್ರಹಿಸಲಾಗುವ ನೀರನ್ನು ಸ್ವಂತ ಪಂಪುಗಳಿಂದ ಮೇಲೆತ್ತಿ ಉಪಯೋಗಿಸಲು ರೈತರಿಗೆ ಅನುಮತಿ ನೀಡಲಾಗುತ್ತಿದೆ. ಈ ಅಣೆಕಟ್ಟುಗಳಲ್ಲಿ ಸಂಗ್ರಹವಾಗುವ ನೀರಿನಿಂದ ಅಂತರ್ಜಲ ಮಟ್ಟದಲ್ಲಿ ಏರಿಕೆಯಾಗಿ ನದಿ/ತೊರೆಗಳ ಸುತ್ತಮುತ್ತ ಇರುವ ಕೊಳವೆ ಬಾವಿ ಹಾಗೂ ತೆರೆದ ಬಾವಿಗಳಲ್ಲಿ ನೀರು ದೊರೆಯುವುದು. ಇದರಿಂದಾಗಿ ರೈತರಿಗೆ ನೀರಾವರಿಗಾಗಿ ನೀರು ದೊರೆತಂತಾಗುವುದಲ್ಲದೆ, ಕುಡಿಯುವ ನೀರಿನ ಬಳಕೆಗೂ ನೀರು ಲಭ್ಯವಾಗುತ್ತದೆ.

**೪. ಏತ ನೀರಾವರಿ ಯೋಜನೆ.**

ನದಿ, ತೊರೆ, ಇತರೆ ಮೇಲ್ಮೈ ಜಲ ಮೂಲಗಳಿಂದ ನೀರನ್ನು ಎತ್ತರವಾದ ಪ್ರದೇಶಕ್ಕೆ ಪಂಪ್‌ಗಳ ಮೂಲಕ ಮೇಲೆತ್ತಿ, ಅಲ್ಲಿಂದ ಗುರುತ್ವಾಕರ್ಷಣೆಯ ಹರಿವಿನ ಮೂಲಕ ನೀರೊದಗಿಸಲು ಏತ ನೀರಾವರಿ ಯೋಜನೆಗಳನ್ನು ಸಹಾ ಇಲಾಖೆಯು ಅನುಷ್ಠಾನಗೊಳಿಸುತ್ತಿದೆ.

**೫. ವಿಶೇಷ ಘಟಕ ಯೋಜನೆ. (ಎಸ್.ಪಿ)**

ಪರಿಶಿಷ್ಟ ಜಾತಿಗೆ ಸೇರಿದ ರೈತರ ಭೂಮಿಗೆ ನೀರಾವರಿ ಸೌಲಭ್ಯವನ್ನು ಕಲ್ಪಿಸಲು ಹೊಸಕೆರೆ ನೀರ್ಮಾಣ, ಅಣೆಕಟ್ಟು, ಪಿಕಪ್ ಮತ್ತು ಬಂದಾರ ನಿರ್ಮಾಣ ಕೆರೆಗಳ ಆಧೂನೀಕರಣ, ಬಾವಿ ಮತ್ತು ಕೊಳವೆ ಬಾವಿಗಳ ಹಾಗೂ ಮೃಲ್ಮೈ ಜಲ ಮೂಲಗಳ ಆಧಾರಿತ ಏತ ನೀರಾವರಿ ಯೋಜನೆಗಳ ಮೂಲಕ ನೀರಾವರಿ ಸೌಲಭ್ಯ ಇತ್ಯಾದಿ ಯೋಜನೆಗಳನ್ನು ಸಣ್ಣ ನೀರಾವರಿ ಇಲಾಖೆಯ ಕೈಗೊಳ್ಳತ್ತಿದೆ. ೨೦೧೩-೧೪ ನೇ ಸಾಲಿನಲ್ಲಿ ರೂ. ೧೬೦೦೫.೦೦ಲಕ್ಷ ಅನುದಾನದ ಎದುರಾಗಿ ರೂ ೧೩೮೮೬.೦೯ ಲಕ್ಷಗಳ ವೆಚ್ಚವನ್ನು ಮಾಡಲಾಗಿದೆ. ಈ ಯೋಜನೆ ಅಡಿ ೨೦೧೩-೧೪ರಲ್ಲಿ ೪೫೯೭ ಹೆಕ್ಟೇರ್ ಹೊಸ ಅಚ್ಚಕಟ್ಟು ಸೃಷ್ಠಿಸುವ ವಾರ್ಷಿಕ ಗುರಿಯ ಎದುರಾಗಿ ೪೩೨೩ ಹೆಕ್ಟೇರ್‌ಗಳ ಹೊಸ ಅಚ್ಚುಕಟ್ಟು ಸೃಷ್ಠಿಸಲಾಗಿದೆ ಮತ್ತು ೧೯ ಹೆಕ್ಟೇರ್ ನೀರಾವರಿ ಸೌಲಭ್ಯ ಸ್ಥಿರಿಕರಿಸುವ ವಾರ್ಷಿಕ ಗುರಿಯ ಎದುರಾಗಿ ೨೦೨ ಹೆಕ್ಟೇರ್ ಪ್ರದೇಶದಲ್ಲಿ ನೀರಾವರಿ ಸೌಲಭ್ಯ ಸ್ಥಿರಿಕರಿಸಲಾಗಿದೆ.

## ೬. ಗಿರಿಜನ ಉಪ ಯೋಜನೆ (ಎಸ್.ಟಿ).

ಪರಿಶಿಷ್ಟ ಪಂಗಡಕ್ಕೆ ಸೇರಿದ ರೈತರ ಭೂಮಿಗೆ ನೀರಾವರಿ ಸೌಲಭ್ಯವನ್ನು ಕಲ್ಪಿಸಲು ಹೊಸಕೆರೆ ನಿರ್ಮಾಣ, ಅಣೆಕಟ್ಟು, ಪಿಕಪ್ ಮತ್ತು ಬಂದಾರ ನಿರ್ಮಾಣ ಕೆರೆಗಳ ಆಧುನಿಕರಣ ಬಾವಿ ಮತ್ತು ಕೊಳವೆ ಬಾವಿಗಳ ಹಾಗೂ ಮೇಲ್ಮೈ ಜಲ ಮೂಲಗಳ ಆಧಾರಿತ ಏತ ನೀರಾವರಿ ಯೋಜನೆಗಳ ಮೂಲಕ ನೀರಾವರಿ ಸೌಲಭ್ಯ ಇತ್ಯಾದಿ ಯೋಜನೆಗಳನ್ನು ಸಣ್ಣ ನೀರಾವರಿ ಇಲಾಖೆಯು ಕೈಗೊಳ್ಳುತ್ತಿದೆ. ೨೦೧೩-೧೪ ನೇ ಸಾಲಿನಲ್ಲಿ ರೂ ೭೦೮೮.೦೦ ಲಕ್ಷ ಅನುದಾನದ ಎದುರಾಗಿ ರೂ ೪೪೯೧.೪೯ ಲಕ್ಷಗಳ ವೆಚ್ಚವನ್ನು ಮಾಡಲಾಗಿದೆ. ಈ ಯೋಜನೆ ಅಡಿ ೨೦೧೩-೧೪ರಲ್ಲಿ ೨೩೭೬ ಹೆಕ್ಟೇರ್ ಹೊಸ ಅಚ್ಚುಕಟ್ಟು ಸೃಷ್ಟಿಸುವ ವಾರ್ಷಿಕ ಗುರಿಯ ಎದುರಿಗೆ ೨೩೨೮ ಹೆಕ್ಟೇರ್‌ಗಳ ಹೊಸ ಅಚ್ಚುಕಟ್ಟು ಸೃಷ್ಟಿಸಲಾಗಿದೆ ಮತ್ತು ೨೬ ಹೆಕ್ಟೇರ್ ನೀರಾವರಿ ಸೌಲಭ್ಯ ಸ್ಥಿರೀಕರಿಸಲಾಗಿದೆ.

## ೭. ವಿಶೇಷ ಅಭಿವೃದ್ಧಿ ಯೋಜನೆ.

ಪ್ರಾದೇಶಿಕ ಅಸಮತೋಲನಾ ನಿವಾರಣೆಗೆ ದಿವಂಗತ ಡಾ॥ ನಂಜುಂಡಪ್ಪ ರವರ ಅಧ್ಯಕ್ಷತೆಯಲ್ಲಿ ಇದ್ದ ಉನ್ನತಾಧಿಕಾರದ ಸಮಿತಿಯ ನೀಡೀರುವ ವರದಿಯಲ್ಲಿ ಗುರುತಿಸಿರುವ ಹಿಂದುಳಿದ ಅತಿ ಹಿಂದುಳಿದ ಹಾಗೂ ಅತ್ಯಂತ ಹಿಂದುಳಿದ ತಾಲ್ಲೂಕುಗಳ ಅಭಿವೃದ್ಧಿಗಾಗಿ ರಾಜ್ಯ ಸರ್ಕಾರವು ವಿಶೇಷ ಅಭಿವೃದ್ಧಿ ಯೋಜನೆಯಡಿ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿದ್ದು, ಇದರಡಿ ನೀರಾವರಿ ಸೌಲಭ್ಯ ಕಲ್ಪಿಸಲು ಹಾಗೂ ಸ್ಥಿರೀಕರಿಸಲು ಹೊಸಕೆರೆ ನಿರ್ಮಾಣ, ಕೆರೆಗಳ ಆಧುನೀಕರಣ, ಅಣೆಕಟ್ಟು ಪಿಕಪ್ ಮತ್ತು ಬಂದಾರ ನಿರ್ಮಾಣ ಇತ್ಯಾದಿ ಯೋಜನೆಗಳನ್ನು ಸಣ್ಣ ನೀರಾವರಿ ಇಲಾಖೆ ಕೈಗೊಂಡಿದೆ. ೨೦೧೩-೧೪ ನೇ ಸಾಲಿನ ರೂ ೪೦೦.೦೦ ಲಕ್ಷ ಅನುದಾನದ ಎದುರಾಗಿ ರೂ ೩೯೯.೯೧ ಲಕ್ಷಗಳ ವೆಚ್ಚವನ್ನು ಮಾಡಲಾಗಿದೆ. ಈ ಯೋಜನೆ ಅಡಿ ೨೦೧೩-೧೪ರಲ್ಲಿ ೩೫೧೯ ಹೆಕ್ಟೇರ್ ಹೊಸ ಅಚ್ಚುಕಟ್ಟು ಸೃಷ್ಟಿಸುವ ವಾರ್ಷಿಕ ಗುರಿಯ ಎದುರಾಗಿ ೩೩೩೮ ಹೆಕ್ಟೇರ್ ಹೊಸ ಅಚ್ಚುಕಟ್ಟು ಸೃಷ್ಟಿಸಲಾಗಿದೆ ಮತ್ತು ೨೩೧೬ ಹೆಕ್ಟೇರ್ ನೀರಾವರಿ ಸೌಲಭ್ಯ ಸ್ಥಿರಿಕರಿಸುವ ವಾರ್ಷಿಕ ಗುರಿಯ ಎದುರಾಗಿ ೨೦೧೨ ಹೆಕ್ಟೇರ್ ಪ್ರದೇಶದಲ್ಲಿ ನೀರಾವರಿ ಸೌಲಭ್ಯ ಸ್ಥಿರೀಕರಿಸಲಾಗಿದೆ.

## ೮. ಕೆರೆಗಳ ದುರುಸ್ತಿ ಮತ್ತು ಪುನಃಶ್ಚೇತನ.

೨೦೧೧-೧೨ನೆ ಸಾಲಿನ ಆಯವ್ಯಯ ಭಾಷಣದಲ್ಲಿ ಮಾಡಿದ ಘೋಷಣೆಯಂತೆ ರಾಜ್ಯದಲ್ಲಿ ಕೆರೆಗಳ ಪುನಃಶ್ಚೇತನ ಕಾರ್ಯವನ್ನು ಕೈಗೊಳ್ಳಲಾಗಿದ್ದು, ಈ ಯೋಜನೆಯ ಅನುಷ್ಠಾನಕ್ಕೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ನೊಡಲ್ ಇಲಾಖೆಯಾಗಿರುತ್ತದೆ. ಈ ಕಾರ್ಯಕ್ರಮದಡಿ ಸಣ್ಣ ನೀರಾವರಿ ಇಲಾಖೆಯ ರಾಜ್ಯದಲ್ಲಿ ೭೦೨ ಕೆರೆಗಳನ್ನು ರೂ ೨೨೪.೧೦ ಕೋಟಿ ಅಂದಾಜು ಮೊತ್ತದಲ್ಲಿ ಅಭಿವೃದ್ಧಿ ಪಡಿಸಲು ಅನುಮೋದನೆ ಪಡೆದುಕೊಂಡು ೨೦೧೧-೧೨ನೇ ಸಾಲಿನಿಂದ ಅನುಷ್ಠಾನಗೊಳಿಸಲಾಗುತ್ತಿದೆ.

೨೦೧೧-೧೨ನೇ ಸಾಲಿನಲ್ಲಿ ಈ ಕಾರ್ಯಕ್ರಮದಡಿ ರೂಪಾಯಿ ೯೫೫೦.೦೦ ಲಕ್ಷ ಅನುದಾನವನ್ನು ಒದಗಿಸಲಾಗತ್ತು. ಇದರ ಎದುರಾಗಿ ರೂಪಾಯಿ ೮೨೨೬.೦೨ ಲಕ್ಷ ವೆಚ್ಚ ಮಾಡಲಾಗಿದೆ. ೨೦೧೨-೧೩ನೇ ಸಾಲಿನಲ್ಲಿ ರೂಪಾಯಿ ೪೧೩೭.೫೦ ಲಕ್ಷ ಅನುದಾನವನ್ನು ಒದಗಿಸಲಾಗಿತ್ತು. ಇದರ ಎದುರಾಗಿ ರೂಪಾಯಿ ೪೦೦೬.೦೩ ವೆಚ್ಚ ಮಾಡಲಾಗಿದೆ. ೨೦೧೩-೧೪ನೇ ಸಾಲಿನಲ್ಲಿ ರೂ. ೧೭೮೭.೨೭ ಲಕ್ಷ ಅನುದಾನವನ್ನು ಒದಗಿಸಲಾಗಿತ್ತು. ಇದರ ಎದುರಾಗಿ ರೂ ೧೭೭೯.೧೮ ಲಕ್ಷ ವೆಚ್ಚ ಮಾಡಲಾಗಿದೆ. ೨೦೧೩-೧೪ರಲ್ಲಿ ೬೯೫ ಹೆಕ್ಟೇರ್ ನೀರಾವರಿ ಸೌಲಭ್ಯ ಸ್ಥಿರಿಕರಿಸುವ ವಾರ್ಷಿಕ ಗುರಿಯ ಎದುರಾಗಿ ೩೭೧ ಹೆಕ್ಟೇರ್ ಪ್ರದೇಶದಲ್ಲಿ ನೀರಾವರಿ ಸೌಲಭ್ಯ ಸ್ಥಿರಿಕರಿಸಲಾಗಿದೆ.

**೯. ಭೂಸ್ವಾಧೀನ ವೆಚ್ಚ ಮತ್ತು ಬಾಕಿ ಬಿಲ್ಲಿನ ಇತ್ಯರ್ಥ.**

೨೦೧೩-೧೪ನೇ ಸಾಲಿನಲ್ಲಿ ಭೂಸ್ವಾದೀನ ಪ್ರಕರಣಗಳ ಇತ್ಯರ್ಥಕ್ಕೆ ರೂ. ೩೮೮೯.೮೭ ಲಕ್ಷಗಳನ್ನು ವೆಚ್ಚ ಮಾಡಲಾಗಿದೆ. ಮುಖ್ಯವಾಗಿ ಈ ಅನುದಾನವನ್ನು ನ್ಯಾಯಾಲಯಗಳ ಆದೇಶದಂತೆ ಹೆಚ್ಚಿಸಲಾಗುವ ಈ ಹಿಂದೆ ಸ್ವಾಧೀನಪಡಿಸಿಕೊಳ್ಳಲಾದ ಭೂಮಿಯ ಮೌಲ್ಯ ಬಡ್ಡಿ ಮೊತ್ತದ ವೆಚ್ಚಗಳನ್ನು ಪಾವತಿಸಲು ಉಪಯೋಗಿಸಿಕೊಳ್ಳಲಾಗಿದೆ.

**ಇ. ರಾಜ್ಯ ವಲಯ ಯೋಜನೆಗಳು**

**೧. ದೂರ ಸಂಶೋಧನೆ ತಾಂತ್ರಿಕತೆ ಬಳಸಿ ಅಂತರ್ಜಲ.**

ಈ ಶೀರ್ಷಿಕೆಯಡಿ ದೂರ ಸಂವೃದನಾ ತಾಂತ್ರಿಕತೆ ಬಳಸಿ ಅಂತರ್ಜಲ ಅಧ್ಯಯನ ಕಾರ್ಯಕ್ರಮವನ್ನು ಪಾದೇಶಿಕ ಮಾಹಿತಿ ಕೇಂದ್ರ ಹೊಂದಿರುವ ಬಳ್ಳಾರಿ ಮತ್ತು ಮೈಸೂರು ವಲಯದ ಜಂಟಿ ನಿರ್ದೇಶಕರ ಮೂಲಕ ಅನುಷ್ಠಾನಗೊಳಿಸಲಾಗಿದೆ. ಈಸಾಲಿನಲ್ಲಿ ಮೈಸೂರು ವಲಯ ಕಛೇರಿ ವತಿಯಿಂದ ೨೦೧೩-೧೪ ನೇ ಸಾಲಿನ ಕೇತ್ರ ಕಾರ್ಯಕ್ರಮವಾದ, ದೂರು ಸಂವೇದನೆ ತಾಂತ್ರಿಕತೆ ಬಳಸಿ ಸಮೀಕ್ಷೆ ಕೈಗೊಂಡು ೪೧ ನೇರಾಕೃತಿಗಳನ್ನು ಗುರುತಿಸಿರುತ್ತದೆ. ಬಳ್ಳಾರಿ ವಲಯ ಕಛೇರಿಯಿಂದ ೨೦೧೦-೧೧ನೇ ಸಾಲಿನ ಮುಂದುವರಿದ ಕಾರ್ಯಕ್ರಮವಾದ ಕನಕಗಿರಿ, ಹೊಸೂರು, ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲಾ ವ್ಯಾಪ್ತಿಯಲ್ಲಿ ನೇರಾ ಕೃತಿಗಳ ಅಧ್ಯಯನ ಹಮ್ಮಿಕೊಳ್ಳಲಾಗಿದ್ದು, ಪ್ರಸ್ತೂತ ಸಾಲಿನಲ್ಲಿ ಪ್ರಗತಿ ಸಾಧಿಸಿರುವುದಿಲ್ಲ. ಮೈಸೂರು ವಲಯ ಕಛೇರಿಯಿಂದ ಉಪಗ್ರಹ ಛಾಯಾ ಚಿತ್ರಗಳನ್ನು ಬಳಸಿಕೊಂಡು ಒಟ್ಟು ೩೧೧.೪೫ ಚದುರ ಕಿಲೊ ಮೀಟರ್ ಕ್ಷೇತ್ರದ ಭೂ ನಿಜಾಂಶ ಸಮೀಕ್ಷೆಯನ್ನು ಕೈಗೊಂಡಿರುತ್ತದೆ. ಸಮೀಕ್ಷಾ ಸಮಯದಲ್ಲಿ ನೀರಾವರಿ ಬಾವಿಗಳ ಅಚ್ಚುಕಟ್ಟು ಪ್ರದೇಶದಲ್ಲಿನ ಬೆಳೆ ವಿವರ, ಬಾವಿ/ಕೊಳವೆಬಾವಿಗಳ ಗಣತಿ, ಭೂ ವೈಜ್ಞಾನಿಕ ಮತ್ತು ಭೂ ಜಲ ಶಾಸ್ತ್ರೀಯ ವಿವರಗಳನ್ನು ಸಂಗ್ರಹ ಮಾಡಲಾಗಿದೆ. ಈ ಶೀರ್ಷಿಕೆಯಡಿ ೨೦೧೩-೧೪ ನೇ ಸಾಲಿನಲ್ಲಿ ರೂ ೫೫.೦೦ ಲಕ್ಷಗಳ ಅನುದಾನದ ಎದುರಾಗಿ ಮಾರ್ಚ್ ೨೦೧೪ರ ಅಂತ್ಯಕ್ಕೆ ರೂಪಾಯಿ ೩೧.೨೬ ಲಕ್ಷ ವೆಚ್ಚವಾಗಿರುತ್ತದೆ.

## ೨. ಸಮೀಕ್ಷೆ, ಮೇಲ್ಮೈ ಜಲ ಮತ್ತು ಅಂತರ್ಜಲ ಸಂಸ್ಥೆಯ ಬಲವರ್ಧನೆ.

ಈ ಶೀರ್ಷಿಕೆಯಡಿ ಕೈಗೊಂಡಿರುವ ಕಾರ್ಯಗಳು ಕೆಳಕಂಡಂತ್ತಿವೆ.

- ❖ ರಾಜ್ಯದ ಅಂತರ್ಜಲ ಅತೀ ಬಳಕೆ ಮತ್ತು ಕ್ಲಿಷ್ಟಕರ/ಅರೆ ಕ್ಲಿಷ್ಟಕರವೆಂದು ಘೋಷಿಸಿರುವ ತಾಲ್ಲೂಕುಗಳಲ್ಲಿ ಕುಡಿಯುವ ನೀರು ಸರಬರಾಜು ಕೊಳವೆಬಾವಿಗಳಲ್ಲಿ ಹಾಗೂ ನೀರಾವರಿ ಬಾವಿ/ಕೊಳವೆ ನಾವಿಗಳಲ್ಲಿ ಅಂತರ್ಜಲ ಹೆಚ್ಚಳ ಮಾಡುವ ನಿಟ್ಟಿನಲ್ಲಿ. ನಿಗದಿ ಪಡಿಸಿದ ಅನುದಾನವನ್ನು ಉಪಯೋಗಿಸಿಕೊಂಡು ಅಂತರ್ಜಲ ಕೃತಕ ಮರುಪೂರೂಕೆ ರಚನೆಗಳನ್ನು ಲಕ್ಷ ರೂಗಳನ್ನು ಅಂತರ್ಜಲ ಅತಿಬಳಕೆ/ಕ್ಲಿಷ್ಟಕರ ತಾಲ್ಲೂಕುಗಳಲ್ಲಿ ೩೦ ಅಂತರ್ಜಲ ಕೃತಕ ಮರು ಪೂರೈಕೆ ರಚನೆಗಳನ್ನು ನಿರ್ಮಿಸಲು ಅನುದಾನವನ್ನು ಸಣ್ಣ ನೀರಾವರಿ ಇಲಾಖೆಯ ವಿಭಾಗಗಳಿಗೆ ವರ್ಗಾತಿಸಲಾಗಿದ್ದು, ನಿರ್ಮಾಣ ಕಾರ್ಯ ಪೂರ್ಣಗೊಂಡಿರುತ್ತದೆ.
- ❖ ರಾಜ್ಯದ ೩೦ಜಿಲ್ಲೆಗಳ ಶಾಲಾ ಕಾಲೇಜುಗಳಲ್ಲಿ ೭೨ ಜನಜಾಗೃತಿ ಶಿಬಿರಗಳನ್ನು ಹಮ್ಮಿಕೊಳ್ಳಲಾಗಿದೆ.
- ❖ ತ್ಯಕ್ತ/ನಿರುಪಯುಕ್ತ ಅಧ್ಯಯನ ಕೊಳವೆಬಾವಿಗಳ ಬದಲಿಗೆ ೩೨ ಹೊಸ ಅಧ್ಯಯನ ಕೊಳವೆಬಾವಿಗಳನ್ನು ೫ ಜಿಲ್ಲೆಗಳಲ್ಲಿ ಸ್ಥಳೀಯ ಟೆಂಡರ್ ಮುಖಾಂತರ ನಿರ್ಮಿಸಲಾಗಿರುತ್ತದೆ.
- ❖ ಹಾಗೂ ಈ ಯೋಜನೆಯಡಿ ಸರ್ಕಾರಿ/ ಅರೆ ಸರ್ಕಾರಿ ಮತ್ತು ಖಾಸಗಿ ಕೊಳವೆಬಾವಿಗಳ ನೀರು ಇಳುವರಿ ಪರಿಕ್ಷೆಯನ್ನು ೫೪೨ ಸಂಖ್ಯೆಯ ಪ್ರಕರಣಗಳಲ್ಲಿ ಮಾಡಿರುತ್ತದೆ. ಅಲ್ಲದೇ ೮೫ ಕೊಳವೆ ಬಾವಿಗಳಲ್ಲಿ ಬಿದ್ದು ಹೋಗಿರುವ ಪಂಪುಗಳನ್ನು ಹೊರಗರಯುವ ಕೆಲದನ್ನು ಕೊರೆಯುವ ಶಾಖೆನಿಂದ ನಿರ್ಮಿಸಿರುತ್ತದೆ. ಸಂಬಂಧಪಟ್ಟ ಅರ್ಜಿದಾರರಿಗೆ ನೀರು ಇಳುವರಿ ಪರೀಕ್ಷೆಯ ದೃಢೀಕರಣ ಪತ್ರಗಳನ್ನು ವಿತರಣೆ ಮಾಡಲಾಗಿದೆ. ಒಟ್ಟು ೬.೦೬೫ ಲಕ್ಷ ರೂಗಳ ಶುಲ್ಕ ಪಾವತಿಸಿಕೊಳ್ಳಲಾಗಿದೆ.
- ❖ ಈ ಯೋಜನೆಯಡಿಯ ಹೆಚ್ಚಿನ ಅನುದಾನವು ಸಿಬ್ಬಂಧಿ ಸಂಬಳ ಮತ್ತು ಭತ್ಯೆ, ಇರ್ಚಿನ, ವಾಹನ ದುರಸ್ತಿ, ಕಟ್ಟಡ ವೆಚ್ಚ ಮತ್ತು ನಿರ್ವಹಣೆ ಮತ್ತಿತರ ಬಾಬ್ತುಗಳಿಗೆ ವ್ಯಯಿಸಿ ಒಟ್ಟು ೨೭೧.೬೪ ಲಕ್ಷ ರೂಗಳ ವೆಚ್ಚ ಮಾಡಿರುತ್ತದೆ.

### ೩. ಕೊರೆಯುವ ಶಾಖೆಯ ಪ್ರಗತಿ.

೨೦೧೩-೧೪ನೇ ಸಾಲಿನಲ್ಲಿ ೮೫ ಕೊಳವೆಬಾವಿಗಗಳಲ್ಲಿ ಬಿದ್ದು ಹೋದ ಪಂಪುಗಳನ್ನು ಹೊರಕ್ಕೆ ತೆಗೆದುಕೊಡಲಾಗಿದೆ. ಕೊಳವೆಬಾವಿಗಳಲ್ಲಿ ಪಂಪುಸೆಟ್‌ಗಳನ್ನು ಯಾವ ಯಾವ ಹಂತಗಳಲ್ಲಿ ಅಳವಡಿಸಬೇಕು ಎಂಬುದರಬಗ್ಗೆ ರೈತರಿಗೆ ತಾಂತ್ರಿಕವಾಗಿ ತಿಳಿವಳಿಕೆ ನೀಡಲಾಗಿದೆ.

**೪. ಇಳುವರಿ ಪರೀಕ್ಷೆ**

ರಾಜ್ಯದಾದ್ಯಂತ ರೈತರು ಮತ್ತು ಇತರೆ ಸಂಘ ಸಂಸ್ಥೆಯವರು ಹೊಸದಾಗಿ ಕೊರೆದಿರುವ ನೀರಾವರಿ/ಕುಡಿಯುವ ನೀರಿನ ಕೊಳವೆ ಬಾವಿಗಳಲ್ಲಿ ಬಂದಿರುವ ನೀರಿನ ಪ್ರಮಾಣವನ್ನು (ಇಳುವರಿ) ತಿಳಿಸಿಕೊಡುವುದು ಈ ಕಾರ್ಯಕ್ರಮದ ಮುಖ್ಯ ಉದ್ಧೇಶವಾಗಿದೆ. ಸದರಿ ಸಾಲಿನಲ್ಲಿ ಒಟ್ಟು ೫೪೨ ಸಂಖ್ಯೆಯ ಕೊಳವೆ ಬಾವಿಗಳಲ್ಲಿ ಇಲಾಖೆಯಲ್ಲಿರುವ ಇಳುವರಿ ಪರಿಕ್ಷಾ ಯಂತ್ರಗಳ ಸಹಾಯದಿಂದ ಕೊಳವೆ ಬಾವಿಗಳಲ್ಲಿ ನೀರಿನ ಇಳುವರಿ ಪರೀಕ್ಷೆಗಳನ್ನು ಮಾಡಿಕೊಡಲಾಗಿದೆ. ಹಾಗೂ ಸಂಬಧಪಟ್ಟ ಅರ್ಜಿದಾರರಿಗೆ ಇಳುವರಿ ಪರೀಕ್ಷೆಯ ದೃಢಿಕರಣ ಪತ್ರಗಳನ್ನು ಮಾಡಿಕೊಡಲಾಗಿದೆ. ಈ ಸಂಬಂಧವಾಗಿ ರೈತರಿಗೆ ಇಳುವರಿ ಪರೀಕ್ಷೆ ಮಾಡಿಕೊಡಲು ಒಟ್ಟು೬.೦೬೫ ಲಕ್ಷಗಳ ಶುಲ್ಕ ವಸೂಲಿ ಮಾಡಿ ಸರ್ಕಾರದ ಖಜಾನೆಗೆ ಜಮಾ ಮಾಡಲಾಗಿದೆ.

**೫. ರಾಷ್ಟ್ರೀಯ ಜಲ ವಿಜ್ಞಾನ ಯೋಜನೆ.**

- ❖ ಈ ಯೋಜನೆಯು ವಿಶ್ವ ಬ್ಯಾಂಕ್ ನೆರವಿನ ಯೋಜನೆಯಾಗಿದ್ದು ಈ ಸಾಲಿನಲ್ಲಿ ಜಲಶಾಸ್ತ್ರ ಯೋಜನೆ ಹಂತ– ‖ ರಡಿಯ ಕಾರ್ಯಕ್ರಮಗಳಲ್ಲಿ ತ್ಯಕ್ತ/ನಿರುಪಯುಕ್ತ ಅಧ್ಯಯನ ಬಾವಿಗಳ ಬದಲಿಗೆ ೨೦೦ ಹೊಸ ಅಧಯನ ಕೊಳವೆಬಾವಿಗಳುನ್ನು ನಿರ್ಮಿಸಿದ್ದು, ಮಾರ್ಚ್ ಅಂತ್ಯಕ್ಕೆ ೩೨ ಕೊಳವೆಬಾವಿಗಳನ್ನು ನಿರ್ಮಿಸಿದೆ. ಈಕುರಿತು ಎರಡು – ಮೂರು ಬಾರಿ ಟೆಂಡರ್‌ನ್ನು ಕರೆದಿದ್ದರೂ ಹೆಚ್ಚಿನ ಪ್ರತಿಕ್ರಿಯೆ ಇಲ್ಲದಿದ್ದರಿಂದ ಹೆಚ್ಚಿನ ಪ್ರಗತಿ ಆಗಿರುವುದಿಲ್ಲ.
- ❖ ಯೋಜಿತ ೨೫ ಜನ ಜಾಗೃತಿ ಶಿಬಿರಗಳ ಎದುರಾಗಿ ೧೮ ಜನ ಜಾಗೃತಿ ಶಿಬಿರಗಳನ್ನು ಆಯಯೋಜಿಸಲಾಗಿದೆ.
- ❖ ಇಲಾಖೆಯ ಕೇಂದ್ರ ಸ್ಥಾನದಲ್ಲಿರುವ ರಾಸಾಯನಿಕ ಪ್ರಯೋಗಾಲಯವನ್ನು level 2+ Referal Chemical Laboratryಎಂದು ಗುರುತಿಸಿದ್ದು, ಕುಡಿಯುವ ನೀರಿನ ಯೋಜನೆಗಳಿಗಾಗಿ ಹಾಗೂ ಸಾರ್ವಜನಿಕ್ಕರಿಂದ ಸ್ವೀಕೃತಗೊಂಡ ಜಲ ಮಾದರಿಗಳನ್ನು ವಿಶ್ಲೇಷಿಸಿ ಮಾರ್ಗದರ್ಶನದೊಂದಿಗೆ ವರದಿಗಳನ್ನು ಲಭ್ಯಗೊಳಿಸಲಾಗುತ್ತಿದೆ. ಇಲಾಖೆಯಲ್ಲಿ ಬೆಂಗಳೂರು ಹಾಗೂ ಇತರ ಆಯ್ದ ಜಿಲ್ಲೆಗಳಲ್ಲಿ ಒಟ್ಟು ೭ ರಾಸಾಯನಿಕ ಪ್ರಯೋಗಾಲಯಗಳು ಕಾರ್ಯನಿರತರವಾಗಿದ್ದು, ಒಟ್ಟು ೭೫೦೭ ಜಲ ಮಾದರಿ ಸಂಗ್ರಹಣೆಯಲ್ಲಿ ಹಿಂದಿನ ವರ್ಷದ ಉಳಿಕೆ ಜಲ ಮಾದರಿಗಳು ಸೇರಿ ೭೫೩೧ ಜಲ ಮಾದರಿಗಳನ್ನು ವಿಶ್ಲೇಷಣೆ ಮಾಡಿರುತ್ತದೆ. ಈ ಸಾಲಿನಲ್ಲಿ ರಾಸಾಯನಿಕ ವಿಶ್ಲೇಷಣೆ ಮೂಲಕ ರೂ.೧೮.೬೮೦ ಲಕ್ಷ ರಾಜಸ್ಥ ಸಂಗ್ರಹಣೆಯಾಗಿದೆ.

- ರಾಜ್ಯದಾದ್ಯಂತ ಅಂತರ್ಜಲ ಮಟ್ಟ ಏರಿತ ಕಂಡು ಕೊಳ್ಳುವಲ್ಲಿ ೧೮೩೫ ಅಧ್ಯಯನ ಬಾವಿ/ಕೊಳವೆ ಬಾವಿಗಳಲ್ಲಿ ಪ್ರತಿ ತಿಂಗಳು ಅಂತರ್ಜಲ ಮಟ್ಟ ದಾಖಲು ಮಾಡಲಾಗುತ್ತಿದೆ. ಅಂತರ್ಜಲ ಗುಣಮಟ್ಟ ಕಂಡುಕೊಳ್ಳುವಲ್ಲಿ ಅಧ್ಯಯನ ಬಾವಿ/ಕೊಳವೆ ಬಾವಿಗಳ ಜಲ ಮಾದರಿಗಳನ್ನು ಸಂಗ್ರಹಿಸಿ ಇಲಾಖಾ ಪ್ರಯೋಗ ಶಾಲೆಯಲ್ಲಿ ವಿಶ್ಲೇಷಣೆ ಮಾಡಿರುತ್ತದೆ.

**೬. ಜಿಲ್ಲಾ ಪಂಚಾಯತ್ ಘಟಕ.**

ಅಂತರ್ಜಲ ವಿಭಾಗದ ಜಿಲ್ಲಾ ಪಂಚಾಯತ್ ಆಡಳಿತ ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ೩೦ ಅಂತರ್ಜಲ ಘಟಕಗಳು ಹಾಗೂ ಸೆಪ್ಟೆಂಬರ್ ೨೦೦೯ ರಿಂದ ಸರ್ಕಾರಿ ಆದೇಶ ಸಂಖ್ಯೆ ಸಿ.ಐ ೭೬ ಎಂ ಜಿ.ಎಸ್ ೨೦೦೮ ಬೆಂಗಳೂರು ಪ್ರಕಾರ ಕೊಪ್ಪಳ, ಗದಗ, ಹಾವೇರಿ, ದಾವಣಗೆರೆ, ಉಡುಪಿ, ಇಳಕಲ್(ಬಾಗಲಕೋಟೆ ಜಿಲ್ಲೆ), ಚಾಮರಾಜನಗರ, ಯಾದಗಿರಿ ಮತ್ತು ರಾಮನಗರಗಳಲ್ಲಿ ಖನಿಜ ಶಾಖೆಯೊಂದಿಗೆ ಅಂತರ್ಜಲ ಶಾಖೆಯು ವಿವಿಧ ಕ್ಷೇತ್ರ ಕಾರ್ಯ ಕ್ರಮಗಳನ್ನು ೨೦೧೩-೧೪ ನೇ ಸಾಲಿನಲ್ಲಿ ಅನುಷ್ಠಾನಗೊಳಿಸಿದೆ. ಇವುಗಳಲ್ಲಿ ಮುಖ್ಯ ಕಾರ್ಯಕ್ರಮಗಳಾದ ಕಿರುಜಲಾನಯನ ಪ್ರದೇಶ ಸಮೀಕ್ಷೆ, ಆಯಾ ಜಿಲ್ಲೆಗಳಲ್ಲಿನ ಸಮಸ್ಯಾತ್ಮಕ ವಿಷಯದ ಬಗೆಗಿನ ವಿಶೇಷ ಅಧ್ಯಯನ, ಅಂತರ್ಜಲ ಕೃತಕ ಮರು ಪೂರೈಕೆ ರಚನೆಗಳ ನಿರ್ಮಾಣ ಮಾಡಲು ಸ್ಥಳಾಯ್ಕೆ ಮಾಡುವುದು, ಸರ್ಕಾರಿ/ ಸರ್ಕಾರೇತರ ಪ್ರಕರಣಗಳಲ್ಲಿ ಬಾವಿ/ಕೊಳವೆಬಾವಿ ನಿರ್ಮಿಸಲು ಸ್ಥಳಾಯ್ಕೆ ಬಗ್ಗೆ ತಾಂತ್ರಿಕ ಸಲಹೆ ನೀಡುವುದು, ವಿಫಲ ಬಾವಿಗಳ ತಪಾಸಣೆ ಹಾಗೂ ಸ್ಥಳಾಯ್ಕೆ ಬಗ್ಗೆ ತಾಂತ್ರಿಕ ಸಲಹೆ ನೀಡುವುದು, ಅಧ್ಯಯನ ಸಮೀಕ್ಷೆ ಪ್ರದೇಶದಲ್ಲಿ ಹಾಗೂ ಅಧ್ಯಯನ ಬಾವಿ/ಕೊಳವೆಬಾವಿಗಳಲ್ಲಿ ಜಲ ಮಾದರಿಗಳನ್ನು ನಿಗದಿತ ಸಮಯದಲ್ಲಿ ಸಂಗ್ರಹಣೆ ಅಧ್ಯಯನ ಬಾವಿಗಳ ಜಲಮಟ್ಟ ದಾಖಲಾತಿ ಹಾಗೂ ಸರ್ಕಾರಿ/ ಸರ್ಕಾರೇತರ ಸಂಸ್ಥೆಗಳಿಂದ ವಿವಿಧ ಕಾರ್ಯ ಕ್ರಮಗಳಿಗೆ ತಾಂತ್ರಿಕ ಸಲಹೆ ಕೋರಿಬಂದ ಪ್ರಕರಣಗಳಿಗೆ ತಾಂತ್ರಿಕ ಸಲಹೆ ಮತ್ತು ವರದಿಗಳನ್ನು ನೀಡುವುದು ಮುಂತಾದ ಕಾರ್ಯಗಳನ್ನು ನಿರ್ವಹಿಸಲಾಗುತ್ತಿದೆ.

**೭. ಕಿರು ಜಲಾನಯನ ಸಮೀಕ್ಷೆ.**

ರಾಜ್ಯದಾದ್ಯಂತ ವಿವಿಧ ಜಿಲ್ಲೆಗಳಲ್ಲಿ ಅನುಮೋದಿತ ಕಿರು ಜಲಾನಯನ ಪ್ರದೇಶ ಸಮೀಕ್ಷೆ ಕಾರ್ಯವನ್ನು ಕೈಗೊಂಡು ೯೪೧.೬೩ ಚ.ಕಿ.ಮೀ. ವಿಸ್ತೀರ್ಣವನ್ನು ಪೂರ್ಣ ಗೊಳಿಸಲಾಗಿದೆ. ಸಮೀಕ್ಷೆ ಸಮಯದಲ್ಲಿ ಒಟ್ಟು ೯೩೦೩ ನೀರಾವರಿ ಬಾವಿಗಳು, ಅಚ್ಚುಕಟ್ಟು ಪ್ರದೇಶದಲ್ಲಿನ ಬೆಳೆ ವಿವರಗಳನ್ನು ಸಂಗ್ರಹಣೆ ಮಾಡಲಾಗಿದೆ. ಅಲ್ಲದೆ ಸಮೀಕ್ಷಾ ಪ್ರದೇಶದಲ್ಲಿರುವ ವಿವಿಧ ಶಿಲಾ ರಚನೆಗಳ ವಿವರ ಮತ್ತು ಮಣ್ಣಿನ ವಿವಿಧತೆಯ ವಿವರಗಳನ್ನು ನಕಾಶೆ ಮೇಲೆ ನಮೂದಿಸಿಕೊಳ್ಳಲಾಗಿದೆ. ಈ ಎಲ್ಲ ವಿವರಗಳನ್ನು ಆಧಾರವಾಗಿಟ್ಟುಕೊಂಡು

ಆಯಾಮ ಕಿರು ಜಲಾನಯನ ಪ್ರದೇಶದಲ್ಲಿನ ಅಂತರ್ಜಲ ಸ್ಥಿತಿಗಳನ್ನು ಲೆಕ್ಕಾಚಾರ ಮಾಡಿ ಅಧ್ಯಯನ ಬಾವಿಗಳಲ್ಲಿ ಜಲಮಟ್ಟದ ದಾಖಲೆ ಮಾಡಿರುವ ವಿವರಗಳನ್ನು ಉಪಯೋಗಿಸಿಕೊಂಡು ಅಂತರ್ಜಲ ವರದಿಗಳನ್ನು ತಾಯಾರಿಸಿ ಇಲಾಖೆಯು ಪ್ರಕಟಿಸುತ್ತಿದೆ. ಹಾಗೂ ವಿಶೇಷ ಅಧ್ಯಯನ ಸಮೀಕ್ಷೆಯಿಂದ ಒಟ್ಟು ೧೩೮.೯೬ ಚ.ಕಿ.ಮೀ. ಪ್ರದೇಶದ ಸಮೀಕ್ಷೆ ಮಾಡಿ ೩೨೮ ಬಾವಿಗಳ ವಿವರ ಸಂಗ್ರಹಿಸಿದೆ.

**೮. ಅಂತರ್ಜಲ ಕೃತಕ ಮರುಪೂರ್ರೈಕೆ ರಚನೆಗಳನ್ನು ನಿರ್ಮಿಸಲು ತಾಂತ್ರಿಕ ಸಲಹೆ.**

ಸಮೀಕ್ಷೆ ಮತ್ತು ಅಂತರ್ಜಲ ಸಂಸ್ಥೆಯ ಬಲವರ್ದನೆ ಯೋಜನೆಗಳಡಿ, ರಾಜ್ಯ ಅಂತರ್ಜಲ ಅತಿ ಬಳಕೆ ಮತ್ತು ಕ್ಲಿಷ್ಟಕರ/ಅರೆಕ್ಲಿಷ್ಟಕರವೆಂದು ಘೋಷಿಸಿರುವ ವಿವಿಧ ತಾಲೂಲಕುಗಳಲ್ಲಿ ಆಯ್ಕೆ ಮಾಡಿಕೊಂಡಿರುವ ಕಿರು ಜಲಾನಯನ ಪ್ರದೇಶದಲ್ಲಿರುವ ಹರಿಯುವ ಸಣ್ಣ ಹಳ್ಳಿಗಳಿಗೆ ಅಡ್ಡಲಾಗಿ ಅಂತರ್ಜಲ ಕೃತಕ ಮರುಪೂರ್ರೈಕೆ ರಚನೆಗಳನ್ನು ನಿರ್ಮಾಣ ಮಾಡಲು ಭೂ ಜಲ ಶಾಸ್ತ್ರೀಯವಾಗಿ ಯೋಗ್ಯವೆನಿಸಿದ ಪ್ರದೇಶದಲದಲ್ಲಿ ಒಟ್ಟು ೪೪ ಸೂಕ್ತವಾದ ಸ್ಥಳಾಯ್ಕೆಯನ್ನು ಮಾಡಿರುತ್ತದೆ. ಕುಡಿಯುವ ನೀರಿನ ಮೂಲಗಳ, ನೀರಾವರಿ ಬಾವಿ/ಕೊಳವೆ ಬಾವಿಗಳ ಅಂತರ್ಜಲ ಮಟ್ಟ ಹೆಚ್ಚಳ ಮಾಡುವ ನಿಟ್ಟಿನಲ್ಲಿ ೩೦ ತಡೆಗೊಡೆಗಳನ್ನು ಈ ಸಾಲಿನಲ್ಲಿ ನಿರ್ಮಾಣ ಮಾಡಲು ಸಣ್ಣ ನೀರಾವರಿ ಇಲಾಖೆಗೆ ವಹಿಸಿದ್ದ, ರೂಪಾಯಿ ೭೪.೯೬ ಲಕ್ಷ ಅನುದಾನವನ್ನು ಅಂಬಂಧಿಸಿದ ೧೭ ಜಿಲ್ಲೆಗಳ ಸಣ್ಣ ನೀರಾವರಿ ವಿಭಾಗಗಳಿಗೆ ಬಿಡುಗಡೆ ಮಾಡಿರುತ್ತದೆ.

**೯. ನಿರೀಕ್ಷಣಾ ಬಾವಿಗಳಲ್ಲಿ (Observation Wells) ಜಲಮಟ್ಟ ದಾಖಲಾತಿ.**

ರಾಜ್ಯದಾದ್ಯಂತ ಅಂತರ್ಜಲ ಮಟ್ಟದಲ್ಲಾಗುವ ಏರಿಳಿತವನ್ನು ಅಧ್ಯಯನ ಮಾಡಲು ವಿವಿಧ ಶಿಲಾಸ್ತರಗಳಲ್ಲಿನ ಜಲಭರಗಳು ಹರಡಿರುವ ಪ್ರದೇಶದಲ್ಲಿ ಒಟ್ಟು ೧೮೨೫ ಅಧ್ಯಯನ ತೊಡುವಾವಿ/ಕೊಳವೆ ಬಾವಿಗಳನ್ನು ಗುರುತಿಸಿದ್ದು, ಪ್ರತಿ ತಿಂಗಳು ಅಧ್ಯತೆ ಮೇರೆಗೆ ಜಲಮಟ್ಟವನ್ನು ದಾಖಲೆ ಮಾಡಲಾಗುತ್ತಿದೆ. ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡಿರುವ ಅಧ್ಯಯನ ಬಾವಿ/ಕೊಳವೆ ಬಾವಿಗಳಲ್ಲಿ ಒಟ್ಟು ೨೧೮೬೨ ಜಲಮಟ್ಟವನ್ನು ದಾಕಲೆ ಮಾಡಿರುತ್ತದೆ. ಈ ಜಲಮಟ್ಟದ ವಿವರಗಳನ್ನು ಆಧಾರವಾಗಿಟುಕೊಂಡು ಪ್ರತಿ ತಿಂಗಳೂ ರಾಜ್ಯದ ಅಂತರ್ಜಲ ಮಟ್ಟದ ಏರಿತ ಸ್ರಚಿಸುವ ಮಾಪಕ ಅಂತರ್ಜಲಮಟ್ಟ ವಿಶ್ಲೇಷಣಾ ವರಧಿಯನ್ನು ಪ್ರಕಟಿಸಲಾಗುತ್ತಿದೆ.

**೧೦. ತಾಂತ್ರಿಕ ಸಲಹೆ**

ರಾಜ್ಯದಾದ್ಯಂತ ಕುಡಿಯುವ ನೀರು, ನೀರಾವರಿ ಮಾಡಲು ಹಾಗೂ ಕೈಗಾರಿಕೆಗಳ ಉಪಯೋಗಕ್ಕೆ ಸರ್ಕಾರಿ/ಸರ್ಕಾರೇತರ ಸಂಸ್ಥೆಗಳಿಂದ ಹೊಸದಾಗಿ ಬಾವಿ/ಕೊಳವೆ ಬಾವಿಗಳನ್ನು

ನಿರ್ಮಾಣ ಮಾಡಲು ಕೋರಿ ಬಂದ ಅರ್ಜಿಗಳನ್ನು ಪರಿಶೀಲಿಸಿ, ಇಲಾಖೆಯ ತಾಂತ್ರಿಕ ಸಿಬ್ಬಂದಿ ವರ್ಗದವರು ಸಂಬಂಧಪಟ್ಟ ಅರ್ಜಿದಾರರ ಜಮೀನುಗಳಲ್ಲಿ ಭೂ ವೈಜ್ಞಾನಿಕ ಸಮೀಕ್ಷೆ ಮಾಡಿ ೩೮೬೩ ಮತ್ತು ಭೂ ಭೌತ ವಿಭಾಗದಿಂದ ಒಟ್ಟ ೧೧೫೮ ಸಂಖೆಯಷ್ಟು ಸೂಕ್ತವಾದ ಅಧಿಕ ಅಂತರ್ಜಲ ಇಳುವರಿ ನೀಡುವ ಸ್ಥಳಗಳನ್ನು ಆಯ್ಕೆ ಮಾಡಿ ಆಯಾ ಅಂತರ್ಜಲ ಘಟಕಗಳಿಂದ ದೃಢೀಕರಣ ಪತ್ರಗಳನ್ನು ನೀಡಿರುತ್ತದೆ. ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಜಿಲ್ಲಾ ಅಂತರ್ಜಲ ಕಛೇರಿಗಳು, ೨೦೧೩-೧೪ ನೇ ಸಾಲಿನಲ್ಲಿ ತಾಂತ್ರಿಕ ಸಲಹೆ ನೀಡಿರುವ ಸಂಬಂಧವಾಗಿ, ಭೂ ವೈಜ್ಞಾನಿಕ ವಿಧಾನ ಮತ್ತು ಭೂ ಭೌತಿಕ ವಿಧಾನಗಳಿಂದ ಹೊಸದಾಗಿ ಬಾವಿ/ಕೊಳವೆ ಬಾವಿಗಳನ್ನು ನಿರ್ಮಾಂ ಮಾಡಲು ನೀಡಿದ ತಾಂತ್ರಿಕ ಸಲಹೆಗೆ ಒಟ್ಟು ರೂ. ೧೫.೨೫೧೬ ಲಕ್ಷ ಗಳನ್ನು ಸಂಗ್ರಹಣೆ ಮಾಡಿರುತ್ತದೆ.

# ಅಧ್ಯಾಯ - ನಾಲ್ಕು

## ಅಥಣಿ ತಾಲೂಕಿನ ಸಣ್ಣ ನೀರಾವರಿಯ ಬಳಕೆದಾರರ ಪ್ರತಿಕ್ರಿಯೆ ವಿಶ್ಲೇಷಣೆ

೧ ಸಣ್ಣ ನೀರಾವರಿ ಬಳಕೆಯ ಪೂರ್ವದ ಸ್ಥಿತಿಗತಿ

೨ ಕೃಷಿಕರು ಬಳಸುತ್ತಿರುವ ನೀರಾವರಿ ಯೋಜನೆಗಳು

೩ ಸರಕಾರದ ಯೋಜನೆಗಳಲ್ಲಿ ಸಣ್ಣ ನೀರಾವರಿಯ ಪಾತ್ರ

# ಅಧ್ಯಾಯ – ನಾಲ್ಕು

# ಅಥಣಿ ತಾಲೂಕಿನ ಸಣ್ಣ ನೀರಾವರಿಯ ಬಳಕೆದಾರರ ಪ್ರತಿಕ್ರಿಯೆ ವಿಶ್ಲೇಷಣೆ

## ಪ್ರಸ್ತಾವನೆ

ಪುರಾತನ ಕಾಲದಿಂದಲೂ ತನ್ನದೇಯಾದ ಮಹತ್ವ ಮತ್ತು ಪ್ರಾಮುಖ್ಯತೆಯನ್ನು ಉಳಿಸಿಕೊಂಡು ಬಂದಿರುವ ಕೃಷಿಯು, ಗ್ರಾಮೀಣ ಭಾರತದ ಜೀವನಾಧಾರ ವೃತ್ತಿಯಾಗಿದೆ. ಅಕ್ಷರಸ್ಥ ನಾಗರಿಕರೆನ್ನಿಸಿಕೊಂಡವರಿಗಿಂತ ಅನಕ್ಷರಸ್ಥ ಗ್ರಾಮೀಣ ಜನರೇ ಮುಂಚೂಣಿಯಲ್ಲಿದ್ದು ನಡೆಸುತ್ತಿರುವ ಕೃಷಿಯಿಂದ ಪುರುಷ–ಮಹಿಳೆಯರಿಬ್ಬರೂ ಗಮನಾರ್ಹವಾದ ಪಾತ್ರವನ್ನು ವಹಿಸಿದ್ದಾರೆ.

ದಿನಕ್ಕೊಂದು ಪರಿಷ್ಕರಿಸಿದ ದರ ಪಟ್ಟಿಯನ್ನು ತೇಲಿ ಬಿಡುವ ಮಾರುಕಟ್ಟೆಯಲ್ಲಿ ಜೀವನಾಶ್ಯಕ ವಸ್ತುಗಳನ್ನು ಕೊಳ್ಳಬೇಕಾದರೂ ಸಹ ಚಿಂತೆಗೀಡು ಮಾಡುತ್ತಿದೆ. ಅಂತಹುದರಲ್ಲಿ ಮಕ್ಕಳ ಶಿಕ್ಷಣ, ಆರೋಗ್ಯ, ಮನೆಯ ನಿರ್ವಹಣೆ, ಸಂಬಂಧಿಗಳ ಕಾರ್ಯಕ್ರಮ ತುಂಬಿರುವ ಸಮಾಜ ಎಂದೆಲ್ಲ ನೋಡಿದಾಗ ಪುರುಷನ ದುಡಿದು ಕುಟುಂಬ ನಡೆಸುವ ಪ್ರಾಮಾಣಿಕ ಜನರ ಪರಿಸ್ಥಿತಿಯೇ ಹೀಗಿರಬೇಕಾಗದರೆ ನೂರಾರು ಸಾವಿರಾರು ದುರಭ್ಯಾಸಗಳಿಗೆ (ಕೆಟ್ಟ ಚಟಗಳಿಗೆ) ಅಂಟಿಕೊಂಡು ದುಡಿದಿದ್ದನ್ನು ಮನಗೆ ತರುವ ಮುನ್ನವೇ ಹಾಳು ಮಾಡುವ ಬರುತ್ತಿರುವ ಸಮಾಜಿದ ಕೆಲವು ಪುರುಷರನ್ನು ನೋಡಿದಾಗ ಗ್ರಾಮೀಣ ಭಾರತದ ಜನರ ಜೀವನದ ಸ್ಥಿತಿ ಹೇಗಿರಬೇಕು?

### ೧. ನೀರಾವರಿ ಪೂರ್ವದ ಸ್ಥಿಗತಿ

ಕರ್ನಾಟಕ ರಾಜ್ಯದ ಬೆಳಗಾವಿ ಜಿಲ್ಲೆಯಲ್ಲಿ ಬರುವ ಅಥಣಿ ತಾಲೂಕು ೧೧೯ ಗ್ರಾಮಗಳನ್ನು ಹೊಂದಿರುವ ಅತೀ ದೊಡ್ಡ ತಾಲೂಕು ಇದಾಗಿದೆ. ಅಥಣಿ ತಾಲೂಕು ನೀರಾವರಿ ಪೂರ್ವದಲ್ಲಿ ಇರುವ ಸಂಗತಿಗಳು ವಿಚಿತ್ರವಾದ ಕೆಲವು ಪರಿಣಾಮ ಬೀರುವ ಅಂಶಗಳಾಗಿವೆ. ಅವು ಹೇಗೆ ಎಂದರೆ, ಅಥಣಿ ತಾಲೂಕಿನಲ್ಲಿ ಬರುವ ಹಳ್ಳಿಗರು ಕೃಷಿಯನ್ನೆ ನಂಬಿ ಬದುಕನ್ನು ಸಾಗಿಸುತ್ತಿರುವ ಜನರು, ಇವರಿಗೆ ಮಳೆರಾಯನೇ ದೇವರು ಎಂದು ನಂಬಿದ ಭಕ್ತ ಹೃದಯ ಹೊಂದಿದ ಇವರು ಮಳೆಗಾಲದಲ್ಲಿ ಮಾತ್ರ ಬೆಳೆಗಳನ್ನು ಬೆಳೆದು ಬಂದ ಕಾಳುಗಳನ್ನು ಆಹಾರವಾಗಿ ಸೇವಿಸಿ ತಮ್ಮ ಜೀವನವನ್ನು ಸಾಗಿಸುತ್ತಿದ್ದರು. ನೀರಾವರಿ ಪದ್ಧತಿಯನ್ನು ಅರಿತ ಕೆಲವರು ಆಗಿನ ಕಾಲದಲ್ಲಿ ಇದ್ದ ನೀರಿನ ಬಾವಿ/ಗುಂಡನ್ನು ನಿರ್ಮಿಸಿ ಮಳೆಯ ನೀರನ್ನು ಸಂಗ್ರಹಿಸಿ ಸ್ವಲ್ಪ ಪ್ರಮಾಣದ ಅಂತರ್ಜಲ ಹೊಂದಿರುವ ಇವು ನೀರು ಸಂಗ್ರಹ ತಾಣವಾಗಿದ್ದವು.

ತಮ್ಮಲ್ಲಿ ಇರುವ ಎರಡು ಎತ್ತುಗಳನ್ನು ಉಪಯೋಗಿಸಿ ಮಟ್ಟಿ ಹೊಡೆಯುವ ಮೂಲಕ ಕೆಲವರು ವ್ಯವಸಾಯದಲ್ಲಿ ಪಾಲ್ಗೊಳ್ಳುತ್ತಿದ್ದರು, ಇನ್ನೂ ಕೆಲವರು ಮಳೆಯೇ ನೀರಾವರಿ ಎಂದು ತಿಳಿದು ಬೇಸಾಯ ಮಾಡುತ್ತಿದ್ದರು. ನೀರಾವರಿ ಪೂರ್ವದಲ್ಲಿರುವ ಈ ಸಾಮಾನ್ಯ ಜನರು ಅನಕ್ಷರಸ್ಥರು, ಮೂಢನಂಬಿಕೆಗೆ ಮೊರೆ ಹೊಂದಿದ್ದು ಕಂಡು ಬರುತ್ತದೆ. ಮಳೆ ಬರದೇ ಇದ್ದ ಸಂದರ್ಭದಲ್ಲಿ ಇವರು ಹೊಟ್ಟೆ ಪಾಡಿಗಾಗಿ ವಲಸೆ ಹೋದ ಉದಾಹರಣೆಗಳು ಇವೆ. ಆಗ ದುಡಿಯಲು ಹೋದ ಕೆಲವು ಜನರು ಇಂದಿಗೂ ಮರಳಿ ಬರದೇ ಇರುವುದು ಕಂಡು ಬರುತ್ತದೆ.

ತಮ್ಮ ಭೂಮಿಯನ್ನೆ ನಂಬಿ ವ್ಯವಸಾಯದಲ್ಲಿ ಇದ್ದ ಕೆಲವರು, ತಮ್ಮ ಹಾಗೆ ಕುಟುಂಬದ ಎಲ್ಲಾ ಜನರನ್ನು ಅನಕ್ಷರತೆಯ ಕಡೆಗೆ ದಾಪುಗಾಲು ಹಾಕಲು ದಾರಿ ಮಾಡಿರುವುದು. ನೀರಾವರಿ ವ್ಯವಸ್ಥೆಯನ್ನು ಹೊಂದಿರದ ಇವರು ಜೀವನ ಮಟ್ಟದಲ್ಲಿ ಯಾವುದೇ ಬೆಳವಣಿಗೆ ಕಾಣದವರು ಎಂದು ತಿಳಿಯುತ್ತದೆ.

ಭಾರತ ಸರ್ಕಾರ ಹಾಗೂ ಕರ್ನಾಟಕ ಸರ್ಕಾರದಿಂದ ರೂಪಿತಗೊಂಡ ಕೆಲವು ಯೋಜನೆಗಳು ಇವರನ್ನು ಅಭಿವೃದ್ಧಿಯತ್ತ ಮುಖ ಮಾಡಿದ್ದು ಅದರಲ್ಲಿ ಇರುವ ಕೆಲವು ಯೋಜನೆಗಳು ಈ ಕೆಳಗಿನಂತೆ ನೋಡಬಹುದು.

೧. ಬಾವಿ ನಿರ್ಮಾಣ ಕಾರ್ಯಕ್ರಮ ೧೯೬೬
೨. ಸಣ್ಣ ರೈತರ ಅಭಿವೃದ್ಧಿ ಸಂಸ್ಥೆ ೧೯೭೧
೩. ಬರಗಾಲ ಸಂಭವನೀಯ ಪ್ರದೇಶಗಳ ಕಾರ್ಯಕ್ರಮ ೧೯೭೦
೪. ಮರಭೂಮಿ ಅಭಿವೃದ್ಧಿ ಕಾರ್ಯಕ್ರಮ ೧೯೭೭
೫. ಗಂಗಾ ಕಲ್ಯಾಣ ಯೋಜನೆ ೧೯೯೫

ಈ ಮೇಲಿನ ಯೋಜನೆಗಳ ಮುಖಾಂತರ ಅಥಣಿ ತಾಲೂಕಿನಲ್ಲಿ ನೀರಾವರಿಯ ಪ್ರಮಾಣ ಹೆಚ್ಚಾಗಿ ಬಳಕೆಯಾಗಿರುವುದು ಇದರ ಫಲಾನುಭವಿಗಳು ಅಭಿವೃದ್ಧಿ ಹೊಂದಿದ್ದು ಕಂಡು ಬರುತ್ತದೆ.[೧೬]

ಅಥಣಿ ತಾಲೂಕಿನಲ್ಲಿ ಇರುವ ರೈತರು ಸರಕಾರದಿಂದ ಹಾಗೂ ಸರಕಾರೇತರ ಸಂಸ್ಥೆಯಿಂದ ರೂಪಿತವಾದ ಯೋಜನೆ ಪಡೆಯುವಲ್ಲಿ ಸಫಲವೋ ಅಥವಾ ವಿಫಲವೋ ಎಂದು ತಿಳಿಯುವುದು ಹಾಗೂ ಕೃಷಿಯಲ್ಲಿ ಅವರು ಬಳಸುತ್ತಿರುವ ಉಪಕರಣಗಳು, ಯಾವವು? ಹಾಗೂ ಅವರು ಬಳಸುತ್ತಿರುವ ನೀರಾವರಿ ಪದ್ಧತಿ ಪ್ರಮಾಣದಾಗಿದೆಯೋ ಅಥವಾ ಕಡಿಮೆಯಾಗಿದೆಯೋ? ಅವರ ಜೀವನ ಮಟ್ಟದಲ್ಲಿ ಆಧ ಬದಲಾವಣೆ ಕೃಷಿಯಲ್ಲಿ ಅಭಿವೃದ್ಧಿಯಾಗಲು ಬೇಕಾದ ಅವಶ್ಯಕ ಮಾಹಿತಿ ತಿಳಿದು ಸರಕಾರಕ್ಕೆ ರೈತರ ಸಮಸ್ಯೆಗಳ

೧೬.ಭಾರತದ ಆರ್ಥಿಕ ಅಭಿವೃದ್ಧಿ – ಎಚ್ ಆರ್ ಕೃಷ್ಣಮೂರ್ತಿ, ಸಪ್ನಾ ಬುಕ್ ಹೌಸ ೨೦೧೫ ಪುಟ ಸಂಖ್ಯೆ –IIX

ಮೂಲಗಳನ್ನು ತಿಳಿದು ಅವರ ಸಂರಕ್ಷಣೆಗೆ ಮಾಡಬೇಕಾದ ಪದ್ಧತಿ ತಿಳಿಯುವುದು ಈ ಎಲ್ಲಾ ಉದ್ದೇಶವನ್ನು ಇಟ್ಟುಕೊಂಡ ಈ ಅಧ್ಯಯನ ತಿಳಿಯಲು ಕೃಷಿ ಕಾರ್ಮಿಕರು, ಹಾಗೂ ರೈತರನ್ನು ನೀರು ಬಳಕೆದಾರರ ಸಂದರ್ಶಿಸಿ ಮಾಹಿತಿ ಪಡೆದು ಈ ಕೆಳಗಿನಂತೆ ನೀಡಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಸೂಕ್ತವಾಗುವ ರೀತಿಯಲ್ಲಿ ಹಲವಾರು ನೀರಾವರಿ ಯೋಜನೆಗಳನ್ನು, ವಿವಿಧ ರೀತಿಯಲ್ಲಿ ಇರುವ ನೀರಾವರಿ ಪದ್ಧತಿಗಳನ್ನು ಬಳಸುತ್ತಾ ತಮ್ಮ ಜೀವನದ ಮಟ್ಟದಲ್ಲಿ ಅಭಿವೃದ್ಧಿ ಹೊಂದಿದಾರೆ. ಸಾಮಾನ್ಯ ಜನರ ಬೆಳವಣಿಗೆಯನ್ನು ಸಂದರ್ಶನದ ಮೂಲಕ ಅಥಣಿ ತಾಲೂಕಿನ ವಿವಿಧ ಗ್ರಾಮಗಳಲ್ಲಿ ಬರುವ ೩೦ ಜನರನ್ನು ಸಂದರ್ಶಿಸಿ, ಅವರ ಕುರಿತು ವೈಯಕ್ತಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಹಾಗೂ ಶೈಕ್ಷಣಿಕ ಮಟ್ಟದಲ್ಲಿ ಆದ ಬದಲಾವಣೆಗಳನ್ನು ಹಾಗೂ ಅವನ ಸ್ಥಿತಿಗತಿಯನ್ನು ತಿಳಿಯಲು ಪ್ರಯತ್ನಿಸಲಾಗಿದೆ.

ಸಂದರ್ಶಿತ ೩೦ ಜನರ ಮಾಹಿತಿಯಲ್ಲಿ ಹೆಚ್ಚಿನ ಪ್ರಮಾಣದ ಅನಿಸಿಕೆಗಳು ಒಂದೇ ರೀತಿಯಾಗಿ ಇರುವುದು ಕಂಡು ಬಂದ್ದಿದ್ದು. ಅದರಲ್ಲಿ ವಿವಿಧ ವಿಚಾರಗಳನ್ನು ಹೊಂದಿದ್ದ ೧೬ ಜನರ ಮಾಹಿತಿ ನಿಡುತ್ತಿದ್ದೆನೆ.

**೧. ಸಂದರ್ಶಿತ ನೀರಾವರಿ ಬಳಕೆದಾರರಿಗೆ ಸಂಬಂಧಿಸಿದ ಸಾಮಾನ್ಯ ವೈಯಕ್ತಿಕ ಮಾಹಿತಿಗಳು.**

ಅಥಣಿ ತಾಲೂಕಿನಲ್ಲಿ ಬರುವ ೧೦೯ ಹಳ್ಳಿಗಳಲ್ಲಿ ಇರುವ ನಾಲ್ಕು ವಲಯಗಳಿಂದ್ದು ಅದರಲ್ಲಿ ಒಂದು ವಲಯಕ್ಕೆ ನಾಲ್ಕು ಜನರಂತೆ ಒಟ್ಟು ೧೬ ಜನರ ವೈಯಕ್ತಿಕ ಜೀವನದಲ್ಲಿ ನೀರಾವರಿ ಪದ್ಧತಿಗಳನ್ನು ಅಳವಡಿಸಿ ಅಭಿವೃದ್ಧಿ ಸಾಧಿಸಿದ. ಜನರನ್ನು ಸಂದರ್ಶಿಸಿ ಈ ಕೆಳಕಂಡ ವಿಚಾರಗಳನ್ನು ಚರ್ಚಿಸಿ ಮಾಹಿತಿ ಪಡೆಯಲಾಯಿತು.

**ಕೋಷ್ಟಕ–೧**

**ವಯಸ್ಸಿನ ಪ್ರಮಾಣ.**

| ಅ.ನಂ. | ವಯಸ್ಸಿನ ಪ್ರಮಾಣ | ನೀರು ಬಳಕೆದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧. | ೨೦–೩೦ | ೭ | ೪೩.೭೫% |
| ೨. | ೩೧–೪೦ | ೬ | ೩೭.೫೦% |
| ೩ | ೪೧–೫೦ | ೨ | ೧೨.೫೦% |
| ೪ | ೫೧ ಕ್ಕಿಂತ ಮೇಲ್ಪಟ್ಟು | ೧ | ೬.೨೫% |
| **ಒಟ್ಟು** | | ೧೬ | ೧೦೦% |

**ಮೂಲ : ಸಮೀಕ್ಷೆ**

ನೀರಾವರಿ ವ್ಯವಸಾಯದಲ್ಲಿ ಗರಿಷ್ಠ ೨೦-೩೦ ವಯಸ್ಸಿನ ಶೇಕಡಾ ೪೩.೭೫ ರಷ್ಟು, ಕನಿಷ್ಠ ೫೧ ವಯಸ್ಸಿನ ಮೇಲ್ಪಟ್ಟ ವಯಸ್ಸಿನ ಶೇಕಡಾ ೬.೨೫ ರಷ್ಟು ನೀರಾವರಿ ಬಳಸುತ್ತಿರುವುದು ಕಂಡು ಬರುವುದು.

ಉತ್ಸಾಹಿ ಯುವಕರಲ್ಲಿ ಇರುವ ಒಂದು ಆತ್ಮ ವಿಶ್ವಾಸ ಈ ಕೃಷಿಯ ಮೇಲೆ ಇರುವ ಒಂದು ನಂಬಿಕೆ ಹಾಗೂ ಅವರಲ್ಲಿ ಇರುವ ಶಕ್ತಿ ಶೇಕಡಾ ೪೩.೭೫ ರಷ್ಟು ಇರುತ್ತಿರುವುದು ಕಂಡು ಬರುವುದು. ದೇಹಕ್ಕೆ ವಯಸ್ಸು, ಅವರು ಅನುಭವಕ್ಕೆ ವಯಸ್ಸು ಆಗಲು ಸಾಧ್ಯವಿಲ್ಲ ಎಂದು ಹೇಳಬೇಕಾದರೆ, ೫೦ಕ್ಕಿಂತ ಮೇಲ್ಪಟ್ಟ ವಯಸ್ಸಿನ ಹಿರಿಯರು ತಮ್ಮ ಹಿಂದಿನ ಅನುಭವದ ಮೇಲೆ ಈಗಲೂ ಕೂಡಾ ಇದರಲ್ಲಿ ಭಾಗಿಯಾಗಿರುವುದು ಕಂಡು ಬರುತ್ತದೆ.

**ಕೋಷ್ಟಕ-೨**

**ಶೈಕ್ಷಣಿಕ ಮಟ್ಟದ ಪ್ರಮಾಣ**

| ಅ.ನಂ. | ಶೈಕ್ಷಣಿಕ ಮಟ್ಟ | ಬಳಕೆದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧. | ಪ್ರಾಥಮಿಕ/ಪ್ರೌಢ | ೫ | ೩೧.೨೫% |
| ೨. | ಕಾಲೇಜು | ೪ | ೨೫.೦೦% |
| ೩ | ಪದವಿ ಶಿಕ್ಷಣ | ೨ | ೧೨.೫% |
| ೪ | ಸ್ನಾತಕೋತರ ಪದವಿ | ೩ | ೧೮.೭೫% |
| ೫. | ಅನಕ್ಷರತೆ | ೨ | ೧೨.೫% |
| | **ಒಟ್ಟು** | **೧೬** | **೧೦೦%** |

**ಮೂಲ : ಸಮೀಕ್ಷೆ**

ಈ ನೀರಾವರಿ ಬೇಸಾಯದಲ್ಲಿ ಶೇಕಡಾ ೩೧.೨೫ ರಷ್ಟು ಜನರು ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಪಡೆದಿರುವುದು ಹಾಗೂ ಸ್ನಾತಕೋತ್ತರ ಪದವಿ ಪಡೆದವರ ಪ್ರತಿಶತ ೧೮.೭೫ ರಷ್ಟು ಮತ್ತು ಅನಕ್ಷರತೆಯ ಪ್ರಮಾಣ ೧೨.೫% ರಷ್ಟು ಕಂಡು ಬರುತ್ತದೆ.

ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಪಡೆದವರು ತಮ್ಮ ಬೇಸಾಯದಲ್ಲಿ ಬರುವ ತೊಂದರೆಗಳಿಗೆ ತಲೆ ಬಾಗಿರುವುದರಿಂದ ಹೆಚ್ಚಿನ ಶಿಕ್ಷಣ ಪಡೆಯುವಲ್ಲಿ ವಂಚಿತರಾಗಿದ್ದಾರೆಂದು ಕಂಡು ಬರುತ್ತದೆ.

ಸ್ನಾತಕೋತ್ತರ ಪದವಿ ಪಡೆದ ಯುವಕರು ಸರಿಯಾದ ಶಿಕ್ಷಣಕ್ಕೆ ಸೂಕ್ತವಾದ ಉದ್ಯೋಗ ದೊರೆಯದೇ ಈ ಬೇಸಾಯಕ್ಕೆ ಮೊರೆ ಹೋಗಿದ್ದಾರೆ ಎಂದು ಕಂಡು ಬರುತ್ತದೆ. ಅನಕ್ಷರಸ್ಥರು ಹುಟ್ಟಿನಿಂದಲೇ ಬೇಸಾಯದಲ್ಲಿ ಇರುವ ಇವರ ಕುಟುಂಬ ಶಿಕ್ಷಣ ಪಡೆಯುವದಲ್ಲಿ ವಂಚಿತವಾಗಿದೆ ಎಂದು ಕಂಡು ಬರುತ್ತದೆ.

**ಕೋಷ್ಟಕ–೩**

**ಭಾಷೆಯ ಪ್ರಮಾಣ**

| ಅ.ನಂ. | ಭಾಷೆಗಳು | ಬಳಕೆದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧. | ಕನ್ನಡ | ೭ | ೪.೭೫% |
| ೨. | ಮರಾಠಿ | – | ೦% |
| ೩ | ಹಿಂದಿ | – | ೦% |
| ೪ | ಕನ್ನಡ ಹಾಗೂ ಮರಾಠಿ | ೫ | ೩೧.೨೫% |
| ೫ | ಕನ್ನಡ ಹಾಗೂ ಹಿಂದಿ | ೪ | ೨೫% |
| | ಒಟ್ಟು | ೧೬ | ೨೦೦% |

**ಮೂಲ : ಸಮೀಕ್ಷೆ**

ನೀರಾವರಿ ಬೇಸಾಯದಲ್ಲಿ ಗರಿಷ್ಠ ೪೩.೭೫%ರಷ್ಟು ಪ್ರಮಾಣದ ಜನರು ಮಾತೃ ಭಾಷೆ ಕನ್ನಡ ಭಾಷೆಯನ್ನು ಬಳಸುತ್ತಿದ್ದಾರೆ. ಕನ್ನಡ ಹಾಗೂ ಮರಾಠಿ ಭಾಷೆ ಹೊಂದಿರುವ ಜನರ ಪ್ರತಿಶತ ೩೧.೨೫% ಹಾಗೂ ಕನಿಷ್ಠ ೨೫% ರಷ್ಟು ಪ್ರಮಾಣದ ಜನರು ಕನ್ನಡ ಹಾಗೂ ಹಿಂದು ಭಾಷೆ ಮಾತನಾಡುವುದು ಕಂಡು ಬರುತ್ತದೆ.

ಅಥಣಿ ತಾಲೂಕು ಮಹಾರಾಷ್ಟ್ರದ ರಾಜ್ಯ ಗಡಿ ಭಾಗದ ಒಂದು ತಾಲೂಕು ಆಗಿರುವುದರಿಂದ ಮಾತೃ ಭಾಷೆ ಕನ್ನಡವಾದರೂ ಸಹ ವ್ಯಾಪಾರ, ವ್ಯವಹಾರಕ್ಕಾಗಿ ಮಹಾರಾಷ್ಟ್ರ ರಾಜ್ಯವನ್ನು ಬಳಸುತ್ತಿರುವುದರಿಂದ ಮರಾಠಿ ಭಾಷೆಯನ್ನು ಬಳಸುತ್ತಿರುವುದು ಕಂಡು ಬರುತ್ತದೆ.

ನೀರಾವರಿ ಬೇಸಾಯದಲ್ಲಿ ಇರುವ ಶೈಕ್ಷಣಿಕವಾಗಿ ಪ್ರಗತಿ ಹೊಂದಿದ ಕೆಲವು ಜನ ಮಾತೃ ಭಾಷೆ ಜೊತೆಗೆ ರಾಷ್ಟ್ರ ಭಾಷೆ ಯಾವ ಹಿಂದಿ ಭಾಷೆಯನ್ನು ಸಹ ಬಳಸುತ್ತಿರುವುದು ಕಂಡು ಬರುತ್ತದೆ.

**ಕೋಷ್ಟಕ–೪**

**ಕುಟುಂಬದ ನಮೂನೆ**

| ಅ.ನಂ. | ಕುಟುಂಬದ ನಮೂನೆ | ಬಳಕೆದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧. | ವಿಭಕ್ತ | ೬ | ೩೭.೫% |
| ೨. | ಅವಿಭಕ್ತ | ೧೦ | ೬೨.೫% |
| | ಒಟ್ಟು | ೧೬ | ೧೦೦% |

**ಮೂಲ : ಸಮೀಕ್ಷೆ**

ನೀರಾವರಿ ಬೇಸಾಯದಲ್ಲಿ ಇರುವ ಗರಿಷ್ಠ ೬೨.೫% ರಷ್ಟು ಪ್ರಮಾಣದ ಜನರು ಅವಿಭಕ್ತ ಕುಟುಂಬ ಹೊಂದಿರುವುದು ಕನಿಷ್ಠ ೩೭.೫% ರಷ್ಟು ಪ್ರಮಾಣದ ಜನರು ವಿಭಕ್ತ ಕುಟುಂಬ ಹೊಂದಿರುವುದು ಕಂಡು ಬರುತ್ತದೆ.

ಕರ್ನಾಟದಕ ಸಂಸ್ಕೃತಿಗೆ ತಲೆ ಬಾಗುವ ಜನರು ಅವಿಭಕ್ತ ಕುಟುಂಬದಲ್ಲಿ ಹಿಂದೂ ಸಂಸ್ಕೃತಿಗೆ ತಲೆ ಬಾಗದೆ ಇರುವ ಕೆಲವು ಕುಟುಂಬಗಳು ವಿಭಕ್ತ ಕುಟುಂಬದ ಪಾಲಾಗಿರುವುದು ಕಂಡು ಬರುತ್ತದೆ.

**ಕೋಷ್ಟಕ-೫**

**ಆಸ್ತಿ ವಿವರ**

| ಅ.ನಂ. | ಆಸ್ತಿ (ಎಕರೆಗಳಲ್ಲಿ) | ಬಳಕೆದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧. | ೫ ಎಕರೆವರೆಗೆ | ೯ | ೫೬.೨೫% |
| ೨. | ೧೦ ಎಕರೆಯವರೆಗೆ | ೬ | ೩೭.೫% |
| ೩ | ೧೫-೨೫ ಎಕರೆಯವರೆಗೆ | ೧ | ೬.೨೫% |
| | **ಒಟ್ಟು** | **೧೬** | **೧೦೦%** |

**ಮೂಲ : ಸಮೀಕ್ಷೆ**

ನೀರಾವರಿ ಬೇಸಾಯದಲ್ಲಿ ಕನಿಷ್ಠ ಭೂ ಪ್ರದೇಶ ಎಂದರೆ ೫ ಎಕರೆಗಿಂತ ಕಡಿಮೆ ಭೂ ಪ್ರದೇಶ ಹೊಂದಿದವರು, ಗರಿಷ್ಠ ೫೬.೨೫% ರಷ್ಟು ಜನರು ಕಂಡು ಬರುತ್ತಾರೆ. ಗರಿಷ್ಠ ಭೂ ಪ್ರದೇಶ ಹೊಂದಿದವರು ಕನಿಷ್ಟ ೬.೨೫% ಪ್ರಮಾಣದಲ್ಲಿ ಇರುವುದು ಕಂಡು ಬರುವುದು.

"ಚಿಕ್ಕ ಉಳಿತಾಯ ಚಿಕ್ಕ ಸಂಸಾರ" ಎನ್ನುವ ಹಾಗೆ ಚಿಕ್ಕ ಜಮೀನು ಇದರುಕೊಂಡೇ ಅದರಲ್ಲಿ ಚೊಕ್ಕ ಬೇಸಾಯವನ್ನು ಮಾಡಿ ಅಧಿಕ ಆದಾಯ ತರುವಲ್ಲಿ ಮುಂಚೂಣಿಯಲ್ಲಿ ಇರುವುದು ಕಂಡು ಬರುತ್ತದೆ.

**ಕೋಷ್ಟಕ-೬**

**ಮಣ್ಣಿನ ಲಕ್ಷಣದ ಪ್ರಮಾಣ**

| ಅ.ನಂ. | ಮಣ್ಣು | ಬಳಕೆದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧. | ಕರಿ | ೭ | ೪೩.೭೫% |
| ೨. | ಕೆಂಪು/ಮಸಾರಿ | ೩ | ೧೮.೭೫% |
| ೩. | ಕರಿ/ಕೆಂಪು | ೬ | ೩೭.೫% |
| | **ಒಟ್ಟು** | **೧೬** | **೧೦೦%** |

**ಮೂಲ : ಸಮೀಕ್ಷೆ**

ನೀರಾವರಿ ಬೇಸಾಯದಲ್ಲಿ ಹೊಂದಿರುವ ಭೂ ಪ್ರದೇಶದ ಗರಿಷ್ಠ ೪೩.೭೫ ಪ್ರಮಾಣದ ಜನರು ಕರಿಯಾದ ಹಾಗೂ ಫಲವತ್ತಾದ ಮಣ್ಣು ಹೊಂದಿದ್ದಾರೆ ಹಾಗೂ ಕನಿಷ್ಟ ೧೮.೭೫% ರಷ್ಟು ಪ್ರಮಾಣದ ಜನರು ಕೆಂಪು ಮಣ್ಣನ್ನು ಹೊಂದಿರುವುದು ಕಂಡು ಬರುತ್ತದೆ.

ಬೀಜ ಇದ್ದಂತೆ ಬೆಳೆಯೆನ್ನುವ ಹಾಗೆ ಉತ್ತಮ ಆದಾಯ ಬರಬೇಕಾದರೆ ಉತ್ತಮ ಹಾಗೂ ಫಲವತ್ತಾದ ಮಣ್ಣು ಅವಶ್ಯ. ಎಷ್ಟು ಉತ್ತಮ ಮಣ್ಣು ಇರುತ್ತದೆಯೋ ಅಷ್ಟು ಆದಾಯ ಬರಲು ಸಾಧ್ಯ. ಬೆಳೆಯುವ ಬೆಳೆ ಮಣ್ಣಿನಲ್ಲಿ ಇರುವ ಗೊಬ್ಬರ ಮತ್ತು ಮಣ್ಣಿನ ಫಲವತ್ತತೆಯನ್ನು ಅವಲಂಬಿಸಿದೆ ಎಂದು ತಿಳಿಯಬಹುದು.

**ಕೋಷ್ಟಕ–೭**

**ಜಾತಿಯ ಪ್ರಮಾಣ**

| ಅ.ನಂ. | ಜಾತಿ | ಬಳಕೆದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧ | ೨ಎ, ೨ಬಿ | ೪ | ೨೫% |
| ೨. | ಎಸ್.ಸಿ | ೨ | ೧೨.೫% |
| ೩ | ಎಸ್.ಟಿ | ೨ | ೧೨.೫% |
| ೪ | ಮರಾಠಾ | ೧ | ೬.೨೫% |
| ೫ | ಇತರೆ | ೭ | ೪೩.೭೫% |
| | **ಒಟ್ಟು** | **೧೬** | **೧೦೦%** |

**ಮೂಲ : ಸಮೀಕ್ಷೆ**

ನೀರಾವರಿ ಬೇಸಾಯದಲ್ಲಿ ಗರಿಷ್ಠ ೪೩.೭೫ ರಷ್ಟು ಪ್ರಮಾಣದ ಜನರು ಇತರೆ ಜಾತಿಯನ್ನು ಹೊಂದಿದ್ದು, ಪರಿಶಿಷ್ಟ ಜಾತಿಗೆ ಸೇರಿದ ಒಟ್ಟು ಪ್ರತಿಶತ ೧೨.೫% ರಷ್ಟು, ಪರಿಶಿಷ್ಟ ಪಂಗಡ ಜಾತಿಗೆ ಸೇರಿದ ಒಟ್ಟು ಪ್ರತಿಶತ ೧೨.೫% ರಷ್ಟು, ಕನಿಷ್ಠ ೬.೨೫% ಪ್ರಮಾಣದ ಮರಾಠಾ ಜಾತಿಗೆ ಸೇರಿದ ಜನರು ಎಂದು ಕಂಡು ಬರುತ್ತದೆ.

ನೀರಾವರಿ ಬೇಸಾಯದಲ್ಲಿ ಇರುವ ಸಾಮಾನ್ಯ ಜನರು ಎಲ್ಲಾ ಜಾತಿಗೆ ಸೇರಿದವರು ಎಂದು ಹೇಳಬಹುದು. ಅದರ ಜೊತೆಗೆ ಬೇಸಾಯದಲ್ಲಿ ಯಾವುದೇ ಭೇದ ಭಾವಗಳಿಲ್ಲದೇ ಒಟ್ಟಾಗಿ ಇರುವುದು ಕೂಡಿ ಬಾಳುವುದು ನಮಗೆ ಕಂಡು ಬರುತ್ತದೆ.

### ಕೋಷ್ಟಕ–೮

### ಅನುಭವ ಪ್ರಮಾಣ

| ಅ.ನಂ. | ಅನುಭವ ವರ್ಷಗಳಲ್ಲಿ | ಬಳಕೆದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧ | ೧ ರಿಂದ ೫ | ೮ | ೫೦% |
| ೨. | ೬ ರಿಂದ ೧೦ | ೪ | ೨೫% |
| ೩ | ೧೧ ರಿಂದ ೧೫ | ೨ | ೧೨.೫% |
| ೪ | ೧೬ ರಿಂದ ೨೦ | ೦ | ೦% |
| ೫ | ೨೧ ರಿಂದ ಮೇಲೆ | ೨ | ೧೨.೫% |
| | **ಒಟ್ಟು** | **೧೬** | **೧೦೦%** |

**ಮೂಲ : ಸಮೀಕ್ಷೆ**

ನೀರಾವರಿ ಬೇಸಾಯದಲ್ಲಿ ಇರುವ ಗರಿಷ್ಠ ೫೦% ರಷ್ಟು ಪ್ರಮಾಣದ ಜನರಲ್ಲಿ ಕನಿಷ್ಠ ೧ ರಿಂದ ೫ ವರ್ಷದ ಅನುಭವ ಹೊಂದಿರುವುದು, ಕನಿಷ್ಟ ೧೨.೫% ರಷ್ಟು ಜನರಲ್ಲಿ ಗರಿಷ್ಠ ಪ್ರಮಾಣದ ಅನುಭವ ಹೊಂದಿದ್ದಾರೆ.

ನೀರಾವರಿ ಬೇಸಾಯದಲ್ಲಿ ಕನಿಷ್ಠ ಅನುಭವ ಹೊಂದಿರುವ ಜನರು ಗರಿಷ್ಠ ಪ್ರಮಾಣದಲ್ಲಿ ಇರಲು ಕಾರಣವೆಂದರೆ ಆಧುನಿಕ ಯುಗದಲ್ಲಿ ಇರುವ ಯಂತ್ರೋಪಕರಣಕ್ಕೆ ಮೊರೆ ಹೋಗಿ ಹಲವಾರು ಯುವ ಶಕ್ತಿಗಳು ಬೇಸಾಯದ ಮೆಟ್ಟಲು ಏರಿದೆ ಎಂದು ಕಂಡು ಬರುತ್ತದೆ. ಗರಿಷ್ಠ ಪ್ರಮಾಣದ ಅನುಭವ ಹೊಂದಿರುವ ಕನಿಷ್ಠ ಪ್ರಮಾಣದ ಜನರು ಬೇಸಾಯದಲ್ಲಿ ಇರುವುದು ಹೆಮ್ಮೆಯ ವಿಷಯ. "ಅನುಭವದಲ್ಲಿ ಅಮೃತವಿದೆ" ಎಂಬ ಮಾತಿನಂತೆ ಈ ಬೇಸಾಯ ಮಾಡಬೇಕಾದರೆ ಅನುಭವದ ಅವಶ್ಯಕತೆ ಹೆಚ್ಚಾಗಿ ಬೇಕು. ಆ ಅನುಭವದ ಮೇಲಿಂದ ಹೆಚ್ಚಿನ ಆದಾಯ ಗಳಿಸಬಹುದು ಎಂದು ತಿಳಿದು ಬರುತ್ತದೆ.

### ಕೋಷ್ಟಕ–೯

### ನೀರಿನ ಮೂಲಗಳ ಪ್ರಮಾಣ

| ಅ.ನಂ. | ನೀರಿನ ಮೂಲಗಳು | ಬಳಕೆದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧ | ಬಾವಿಗಳು | ೩ | ೧೮.೭೫% |
| ೨. | ಕೋಳವೆಬಾವಿಗಳು | ೪ | ೨೫% |
| ೩ | ಬಾವಿ/ಕೋಳವೆಬಾವಿಗಳು | ೯ | ೫೬.೨೫% |
| | **ಒಟ್ಟು** | **೧೬** | **೧೦೦%** |

**ಮೂಲ : ಸಮೀಕ್ಷೆ**

ನೀರಾವರಿ ಬೇಸಾಯದಲ್ಲಿ ಇರುವ ಗರಿಷ್ಠ ೫೬.೨೫% ರಷ್ಟು ಪ್ರಮಾಣದ ಜನರು ಬಾವಿ/ಬೋರವೇಲ್ ಎರಡೂ ನೀರಾವರಿ ಮೂಲಗಳನ್ನು ಬಳಸುತ್ತಾ ತಮ್ಮ ಬೇಸಾಯದಲ್ಲಿ ಯಶಸ್ಸು ಸಾಧಿಸಿದ್ದು, ಬೇಸಾಯದಲ್ಲಿ ಕನಿಷ್ಠ ೧೮.೭೫% ರಷ್ಟು ಪ್ರಮಾಣದ ಜನರು ಬೇಸಾಯ ಮಾಡುತ್ತಿರುವುದು.

ನೀರಾವರಿ ಬೇಸಾಯಕ್ಕೆ ಬೇಕಾಗುವ ನೀರಾವರಿಯ ನೀರಿನ ಮೂಲಗಳು ಎಂದು ಹೇಳುವ ಹಳ್ಳ, ಕೊಳ್ಳ, ಕೆರೆ, ಬಾವಿ, ಕೋಳವೆ ಬಾವಿ ಇತ್ಯಾದಿಗಳು ಇದರು ನಮಗೆ ನೀರು ಸತತವಾಗಿ ದೊರೆಯಬೇಕು ಎಂದರೆ ಅದರು ಅಂತರ್ಜಲದಿಂದ ಮಾತ್ರ ಸಾಧ್ಯ ಎಂದು ಹೇಳಬಹುದು. ಅದಕ್ಕಾಗಿ ಅಂತರ್ಜಲ ಮೂಲವಾಗಿ ಇರುವ ಬಾವಿ, ಬೋರುಗಳನ್ನು ಉಪಯೋಗಿಸಿ ನೀರು ಸಂಗ್ರಹಣೆ ವ್ಯವಸ್ಥೆಯನ್ನು ಮಾಡಿ ಬೇಸಾಯ ಮಾಡುತ್ತಿರುವುದು ಕಂಡು ಬರುತ್ತದೆ.

**ಕೋಷ್ಠಕ–೧೦**

**ಸಹ ಉದ್ಯೋಗ ಪ್ರಮಾಣ**

| ಅ.ನಂ. | ಸಹ ಉದ್ಯೋಗದ ಹೆಸರು | ಬಳಕೆದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧ | ಹೈನುಗಾರಿಕೆ | ೫ | ೩೧.೨೫% |
| ೨. | ಆಡು ಸಾಕಾಣಿಕೆ | ೧ | ೬.೨೫% |
| ೩ | ತರಕಾರಿ ಬೆಳೆಸುವುದು | ೪ | ೨೫% |
| ೪ | ತೋಟಗಾರಿಕೆ | ೨ | ೧೨.೫% |
| ೫. | ಕೋಳಿ ಸಾಕಾಣಿಕೆ | ೨ | ೧೨.೫% |
| ೬. | ಇತರೇ | ೨ | ೧೨.೫% |
| | **ಒಟ್ಟು** | **೧೬** | **೧೦೦%** |

**ಮೂಲ : ಸಮೀಕ್ಷೆ**

ನೀರಾವರಿ ಬೇಸಾಯದಲ್ಲಿ ಸಹ ಉದ್ಯೋಗ ಪಾತ್ರ ಮಹತ್ವದ ಸ್ಥಾನ ಪಡೆದಿದೆ. ನೀರಾವರಿ ಬೇಸಾಯ ಮಾಡುತ್ತಿರುವ ಗರಿಷ್ಠ ೩೧.೨೫% ರಷ್ಟು ಪ್ರಮಾಣದ ಜನರು ಹೈನುಗಾರಿಕೆಯನ್ನು ಮಾಡುತ್ತಿದ್ದಾರೆ. ತರಕಾರಿ ಬೆಳೆಸುವಲ್ಲಿ ೨೫% ರಷ್ಟು ಜನರು ಪಾಲ್ಗೊಂಡಿದ್ದಾರೆ ಹಾಗೂ ತೋಟಗಾರಿಕೆ, ಕೋಳಿ ಸಾಕಾಣಿಕೆ, ಇತರೇ ಸಹ ಉದ್ಯೋಗ ೧೨.೫% ರಷ್ಟು ಪ್ರತಿಶತದಂತೆ ಸಹ ಉದ್ಯೋಗ ಕೈಗೊಂಡಿದ್ದಾರೆ. ಹಾಗೂ ೬.೨೫% ರಷ್ಟು ಪ್ರತಿಶತ ಜನರು ಆಡು ಸಾಕಾಣಿಕೆಯ ಸಹ ಉದ್ಯೋಗ ಕೈಗೊಂಡಿರುವುದು ಕಂಡು ಬರುತ್ತದೆ.

"ಕಬ್ಬಿನ ನೀರಿನ ಜೊತೆ ಔಡಲ ಗಿಡ ನೀರು ಹಾಯಿತು" ಎಂಬ ಗಾದೆ ಮಾತಿನಂತೆ ನಿರಾವರಿ ಬೇಸಾಯ ಮಾಡಿ ಒಂದೇ ರೀತಿಯಾದ ಆದಾಯಕ್ಕೆ ಮೊರೆ ಹೋಗದೆ, ಅದರ ಜೊತೆ ಇನ್ನೊಂದು ಉದ್ಯೋಗವನ್ನು ಆಯ್ಕೆ ಮಾಡಿಕೊಂಡು ಅದರ ಆದಾಯ ಪಡೆಯುವಲ್ಲಿ ಅಥಣಿ ತಾಲೂಕಿನ ಜನರು ಆರ್ಥಿಕವಾಗಿ ಇರುವ ಸಮಸ್ಯಗೆ ಪರಿಹಾರ ನೀಡಿ ತಮ್ಮ ಜೀವನ ಮಟ್ಟದಲ್ಲಿ ಅಭಿವೃದ್ಧಿ ಹೊಂದಿದ್ದಾರೆ ಎಂದು ಕಂಡು ಬರುತ್ತದೆ.

**ಕೋಷ್ಟಕ–೧೧**

**ನೀರಾವರಿ ಪದ್ಧತಿಗಳು**

| ಅ.ನಂ. | ನೀರಾವರಿ ಪದ್ಧತಿಗಳು | ಬಳಕೆದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧. | ಸಂಪ್ರದಾಯಕ ನೀರಾವರಿ | ೩ | ೧೮.೭೫% |
| ೨. | ಮಡಿಕೆ ನೀರಾವರಿ | – | ೦% |
| ೩ | ಕಾಲುವೆ ನೀರಾವರಿ | – | ೦% |
| ೪ | ಹನಿ ನೀರಾವರಿ | ೭ | ೪೩.೭೫% |
| ೫. | ತುಂತುರು ನೀರಾವರಿ | ೩ | ೧೮.೭೫% |
| ೬. | ಮಲಚಿಂಗ ಪೇಪರ ನೀರಾವರಿ | ೩ | ೧೮.೭೫% |
| | **ಒಟ್ಟು** | **೧೬** | **೧೦೦%** |

**ಮೂಲ : ಸಮೀಕ್ಷೆ**

ನೀರಾವರಿ ಬೇಸಾಯದಲ್ಲಿ ನೀರಾವರಿ ಪದ್ಧತಿಯಲ್ಲಿ ಬರುವ ಹನಿ ನೀರಾವರಿ ಗರಿಷ್ಠ ೫೩.೭೫% ರಷ್ಟು ಪ್ರಮಾಣ ಬಳಸುತ್ತಿರುವರು ಹಾಗೂ ಸಂಪ್ರದಾಯಕ ನೀರಾವರಿ, ತುಂತುರು ನೀರಾವರಿ, ಮಲಚಿಂಗ ಪೇಪರ ನೀರಾವರಿ ಕನಿಷ್ಠ ೧೮.೭೫% ರಷ್ಟು ಪ್ರತಿಶತದಂತೆ ಕಂಡು ಬರುತ್ತದೆ.

ನೀರಾವರಿ ಬೇಸಾಯದಲ್ಲಿ ಬರುವ ನೀರಾವರಿ ಪದ್ಧತಿಗಳು ಬಹು ಮುಖ್ಯವಾದ ಪಾತ್ರ ವಹಿಸುತ್ತದೆ. ಅಥಣಿ ತಾಲೂಕಿನಲ್ಲಿ ಇರುವ ಜನರು ಕೃಷಿಯಲ್ಲಿ ಅಭಿವೃದ್ಧಿ ಹೊಂದುವ ಸಲುವಾಗಿ ಕಡಿಮೆ ನೀರಿನ ವ್ಯವಸ್ಥೆ ಇದದರು ಕೂಡಾ ಅವುಗಳನ್ನೇ ಸಂಗ್ರಹಣೆ ಮಾಡಿ ಆಧುನಿಕರಣದಲ್ಲಿ ಉಪಯೋಗಿಸುತ್ತರುವ ನೀರಾವರಿ ಪದ್ಧತಿಗಳನ್ನು ಬಳಸುತ್ತಾ ಉದಾಹರಹಣೆಗೆ ಹನಿ ನೀರಾವರಿ, ತುಂತುರು ನೀರಾವರಿ, ಮಲಚಿಂಗ ಪೇಪರ ನೀರಾವರಿ

ಪದ್ಧತಿಗಳನ್ನು ಬೆಳೆಸುತ್ತಾ ಅಧಿಕ ಬೆಳೆಗಳನ್ನು ಉತ್ಪಾದನೆ ಮಾಡಿ ಹೆಚ್ಚಿನ ಆದಾಯಗಳಿಸುವಲ್ಲಿ ಯಶಸ್ಸು ಕಂಡಿದ್ದಾರೆ ಎಂದು ಕಂಡು ಬರುತ್ತದೆ.

**ಕೋಷ್ಟಕ–೧೨**

**ಬೆಳೆಗಳು**

| ಅ.ನಂ. | ಬೆಳೆಗಳ ಹೆಸರು | ಬಳಕೆದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧. | ದ್ರಾಕ್ಷಿ | ೫ | ೩೧.೨೫% |
| ೨. | ಕಬ್ಬು | ೩ | ೧೮.೭೫% |
| ೩. | ತರಕಾರಿಗಳು | ೬ | ೩೭.೫% |
| ೪. | ಗೋಧಿ & ಜೋಳ | ೨ | ೧೨.೫% |
| | ಒಟ್ಟು | ೧೬ | ೧೦೦% |

**ಮೂಲ : ಸಮೀಕ್ಷೆ**

ನೀರಾವರಿ ಬೇಸಾಯದಲ್ಲಿ ಗರಿಷ್ಠ ೩೭.೫% ರಷ್ಟು ಜನರು ತರಕಾರಿ ವ್ಯಾಪಾರವನ್ನು ಮಾಡುತ್ತಿದ್ದು ಹಾಗೂ ೩೧.೨೫% ರಷ್ಟು ಪ್ರಮಾಣದ ಜನರು ದ್ರಾಕ್ಷಿ ಬೆಳೆಯನ್ನು ಬೆಳೆಯುತ್ತಿದ್ದು, ೧೮.೭೫% ರಷ್ಟು ಪ್ರಮಾಣದ ಜನರು ಕಬ್ಬನ್ನು ಬೆಳೆಯುತ್ತಿದ್ದು ಕನಿಷ್ಟ ೧೨.೫% ರಷ್ಟು ಪ್ರಮಾಣದ ಜನರು ಗೋಧಿ, ಜೋಳ ಬೆಳೆಯುತ್ತಿರುವುದು ಕಂಡು ಬರುತ್ತದೆ.

ನೀರಾವರಿ ಬೇಸಾಯದಲ್ಲಿ ಹಲವಾರು ರೀತಿಯ ಬೆಳೆಗಳು ಇದ್ದು ಅದರಲ್ಲಿ ವಾಣಿಜ್ಯ ಬೆಳೆಗಳು ಹಾಗೂ ಆಹಾರ ಬೆಳೆಗಳು ಕಂಡು ಬರುವುದು ಅಥಣಿ ತಾಲೂಕಿನಲ್ಲಿ ಗರಿಷ್ಠ ಪ್ರಮಾಣದ ಜನರು ಹೆಚ್ಚಿನ ಆದಾಯ ಗಳಿಸುವ ನಿಟ್ಟಿನಲ್ಲಿ ಆರ್ಥಿಕವಾದ ಜೀವನವನ್ನು ಸಾಗಿಸುವುದರ ಜೊತೆಗೆ ಸಾಮಾಜಿಕವಾಗಿ ಬೇಕಾಗಿರುವಂತಹ ಫಸಲುಗಳು ಮೆಣಸಿನ ಕಾಯಿ, ಬದನೆಕಾಯಿ, ಫ್ಲಾವರ ಹಾಗೂ ಕೋಂಬಿಸ ಆಹಾರ ಬೆಳೆಗಳನ್ನು ಬೆಳೆಯುವುದರ ಜೊತೆಗೆ ಇನ್ನು ಹಲವಾರು ರೀತಿಯಾದ ಆಹಾರ ಬೆಳೆಗಳನ್ನು ಬೆಳೆಯುತ್ತಾರೆ. ಇದಕ್ಕೆ ಕಾರಣವೆಂದರೆ, ಕಡಿಮೆ ಅವಧಿಯಲ್ಲಿ ಹೆಚ್ಚಿನ ಆದಾಯ ಗಳಿಸುವ ವಿಚಾರವಾಗಿದೆ. ವರ್ಷಕ್ಕೆ ಒಂದೇ ಬಾರಿ ಬರುವ ಬೆಳೆಗಳಾದ ಉದಾಹರಣೆಗೆ ಕಬ್ಬು, ದ್ರಾಕ್ಷಿ, ಡಾಳಿಂಬೆ ಬೆಳೆಗಳನ್ನು ಬೆಳೆಯುತ್ತಾರೆ. ವರ್ಷಕ್ಕೆ ಒಂದೇ ಬೆಳೆಯುವಲ್ಲಿ ಅಥಣಿ ತಾಲೂಕಿನ ಜನರು ಹಲವಾರು ಬೆಳೆಗಳನ್ನು ಬೆಳೆಯುವುದು ಕಂಡು ಬರುತ್ತದೆ.

**ಬೆಳೆಗಳ ವ್ಯತ್ಯಾಸಗಳು**

ನೀರಾವರಿ ಬೇಸಾಯದಲ್ಲಿ ಕಂಡು ಬಂದ ಬೆಳೆಗಳು ಹಾಗೂ ಅದೇ ನೀರಾವರಿ ಬಳಕೆದಾರರು ಬೆಳೆಯುತ್ತಿರುವ ಬೆಳೆಗಳನ್ನು ಮತ್ತು ಒಂದೇ ವೇಳೆಯಲ್ಲಿ ಒಂದಕ್ಕಿಂತ ಹೆಚ್ಚಿನ ಬೆಳೆಗಳನ್ನು

ಬೆಳೆಯುತ್ತಿರುವ ಮಿಶ್ರ ಬೆಳೆಗಳ ಬಗೆ ಪ್ರಶ್ನೆ ಕೇಳಲಾಯಿತು ಆ ಸಂದರ್ಭದಲ್ಲಿ ನೀಡಿರುವ ಮಾಹಿತಿ ಈ ಕೆಳಗಿನಂತೆ ಕ್ರೋಢೀಕರಿಸಲಾಗಿದೆ.

**ಕೊಷ್ಠಕ–೧೩**

| ನೀರಾವರಿ ಪೂರ್ವ ಬೆಳೆಗಳು | ನೀರಾವರಿಯಿಂದ ಆದ ಬೆಳೆಗಳು | ಮಿಶ್ರ ಬೆಳೆಗಳು |
|---|---|---|
| ಸಜ್ಜೆ | ದ್ರಾಕ್ಷಿ | ದ್ರಾಕ್ಷಿ, ಶೇಂಗಾ |
| ಶೇಂಗಾ | ದಾಳಿಂಬೆ | ಕಬ್ಬು, ಶೇಂಗಾ |
| ಜೋಳ | ಕಬ್ಬು | ಕಬ್ಬು ಫ್ಲಾವರ |
| ಹುರಳಿ | ಅರಿಷಿಣ | ಅರಿಷಿನ ಮೆಕ್ಕೆಜೋಳ |
| ಕಡಲೆ | ಗೋಧಿ | ತೊಗರಿ ಜೋಳ |
| ಹತ್ತಿ | ಮೆಣಸಿನಗಿಡ | ಕಡಲೆ ಜೋಳ |
| ಮೆಕ್ಕೆ ಜೋಳ | ಬದನೆಗಿಡ | |
| ಗೋಧಿ | ಟೊಮ್ಯಾಟೋ ಗಿಡ | |
| ಸೂರ್ಯಕಾಂತಿ | ಕೊತಂಬರಿ ಸೊಪ್ಪು | |
| ಹವೀಜ್ (ಕೊತಂಬರಿ ಸೊಪ್ಪು) | | |

**ಮೂಲ : ಸಮೀಕ್ಷೆ**

ನೀರಾವರಿ ಬೇಸಾಯದಲ್ಲಿ ಇರುವ ಜನರು ಕಡಿಮೆ ಅವದಿಯಲ್ಲಿ ಅದಿಕ ಆದಾಯದ ಜೋತೆಗೆ ಒಂದಕ್ಕಿಂತ ಹೆಚ್ಚಿನ ಆದಾಯ ಬರುವ ನಿಟ್ಟಿನಲ್ಲಿ ಮಿಶ್ರ ಬೆಳೆ ಬೆಳೆಯುತ್ತಿರುವದು ಕಂದು ಬರುತ್ತದ್ದೆ.

**ಅಭಿಪ್ರಾಯಗಳು:**

ಅಧ್ಯಯನದ ಸಮೀಕ್ಷೆ ಸಮಯದಲ್ಲಿ ಬಳಿಸಲಾದ ಪ್ರಶ್ನಾವಳಿಯ ನಂತರ ನೀರಾವರಿ ಬಳಕೆಯ ಅಭಿಪ್ರಾಯದ ಬಗ್ಗೆ ಪ್ರಶ್ನೆ ಕೇಳಲಾಯಿತ್ತು ಆ ವಿವಿಧ ಅಭಿಪ್ರಾಯಗಳಲ್ಲಿ ಆಯ್ದ ಕೆಲವನ್ನು ಈ ಕೆಳಗಿನಂತೆ ಕ್ರೋಢಿಕರಿಸಲಾಗಿದೆ.

೧ ರೈತನ ಮಗನಾಗಿ ಹುಟ್ಟಿದ್ದೇ ಒಂದು ಶಾಪ, ನಮ್ಮ ನೋವುಗಳನ್ನು ಹಂಚಿಕೊಳ್ಳಲು ಇಲ್ಲಿ ಯಾರೂ ಇಲ್ಲ ಎಲ್ಲದಕ್ಕೂ ನಾವೇ ತಲೆಕೊಡಬೇಕು.

೨ ಜೀವನಕ್ಕೆ ಬಡತನವೆ ಒಂದು ಪಾಠ ಶಾಲೆಯಾಗಿದೆ.

೩ ಸರಕಾರದ ಸೌಲಭ್ಯ ನಮ್ಮಗೆ ಸಿಗುವುದು ಸಾದ್ಯವೆಯಿಲ್ಲ.

೪ ಸರಕಾರ ಉಚಿತವೇಂದು ಹೇಳಿ ಎರಡು ಘಂಟೆ ವಿದ್ಯುತ ಪೂರೈಸುವಕ್ಕಿಂತ ಸಂಪೂರ್ಣ ವಿದ್ಯುತ ನೀಡಿ ಹಣ ಪಾವತಿಸಿಕೋಳ್ಳುವದು ಸೂಕ್ತ.

೫ ನಾವು ಮಳೆಯ ಮೇಲೆ ಬದುಕಿದ ಪ್ರಾಣಿಗಳಂತೆ.

೬ ಸರಕಾರ ಬಡವರಿಗೆ ರೀಯಾಯಿತಿ ನೀಡುವ ಯೋಜನೆಗಳನ್ನೂ ಇನ್ನೂ ರೂಪಿಸಿಲ್ಲ.

೭ ಶಿಕ್ಷಣವಿದ್ದಿದ್ದರೆ ಬೇರೆ ಬೇರೆ ಉದ್ಯೋಗಗಳನ್ನು ಮಾಡುವ ಅವಕಾಶಗಳಿರುತ್ತವೆ.

೮ ಸಮಾಜದಲ್ಲಿ, ಮಾರುಕಟ್ಟೆಯಲ್ಲಿ ನಡೆಯುವ ವಿಚಾರಗಳು, ಬೆಳವಣಿಗೆಗಳು ಮತ್ತು ಜೀವನ ನಡೆಸಲು ಬೇಕಾದಂತಹ ಮಾಹಿತಿ ಲಭ್ಯವಾಗುತ್ತದೆ.

೯ ಆದಾಯದಲ್ಲಿ ಸಮಸ್ಯೆಗಳು ಎದುರು ಬಂದರೆ ಎದುರಿಸುವ ಶಕ್ತಿ ಮತ್ತು ಆತ್ಮ ವಿಶ್ವಾಸ ಬರುತ್ತದೆ.

೧೦ ಅಪಾಯದ ಅಂಚಿನಲ್ಲಿ ಇರುವ ಬೆಳೆಗಳನ್ನು ಸಂರಕ್ಷಣೆ ಮಾಡಬಹುದು.

೧೧ ಸರಕಾರದ ಯೋಜನೆಗಳನ್ನು ಪಡೆಯುವಲ್ಲಿ ಸಫಲರಾಗಲು ಶಿಕ್ಷಣ ಬೇಕು.

೧೨ ಶಿಕ್ಷಣವು ಎಲ್ಲದಕ್ಕೂ ಆಧಾರ. ಇದು ಕದ್ದಿಯದ ವಿದ್ಯೆ.

೧೩ ಜ್ಞಾನ ಇದ್ದರೆ ಮಾತ್ರ ಯಂತ್ರೋಪಕರಣ ಉಪಯೋಗಿಸಲು ಸಾಧ್ಯ.

೧೪ ರೈತರು ತಮ್ಮ ಬೆಳವಣಿಗೆಯ ಸಲುವಾಗಿ ಹಗಲು ರಾತ್ರಿ ದುಡಿಯಬೇಕಾಗುತ್ತದೆ.

೧೫ ಆದಾಯದ ಮಾಹಿತಿ ತಿಳಿಯಲು ಶಿಕ್ಷಣ ಬೇಕೆ ಬೇಕು.

# ಅಧ್ಯಾಯ – ೫

## ಸಮಾರೋಪ

೧. ಪ್ರಸ್ತಾವನೆ

೨. ಫಲಿತಗಳು

೩. ಸಲಹೆ ಸೂಚನೆಗಳು

೪. ಅನುಬಂಧ

- ೧. ಪ್ರಶ್ನಾವಳಿಗಳ ಅನುಸೂಚಿ
- ೨. ಗ್ರಾಮವಾರು ಜನಸಂಖ್ಯೆಯಾದಿ
- ೩. ನೀರಾವರಿ ಮೂಲಗಳ ಯಾದಿ
- ೪. ಛಾಯಾ ಚಿತ್ರಗಳು
- ೫. ಗ್ರಂಥ ಋಣ

# ಸಮಾರೋಪ

## ೧. ಪ್ರಸ್ತಾವನೆ

ಅಥಣಿ ತಾಲೂಕಿನಲ್ಲಿ ಇರುವ ಸಾಮಾನ್ಯ ಜನರು ಕೃಷಿಯನ್ನೇ ನಂಬಿ ತಮ್ಮ ಜೀವನವನ್ನು ನಡೆಸುತ್ತಿದ್ದಾರೆ. ಅಥಣಿ ತಾಲೂಕಾ ಮಹಾರಾಷ್ಟ್ರದ ಗಡಿ ಭಾಗದ ತಾಲೂಕು ಆಗಿದ್ದು ಹಲವಾರು ವರ್ಷಗಳಿಂದ ಮಳೆ ಬಾರದೇ ಅಥಣಿ ತಾಲೂಕ ಹೆಚ್ಚಿನ ಭಾಗ ಬರ ಪೀಡಿತ ಪ್ರದೇಶ ಎಂದು ಘೋಷಣೆಯ ಹಣೆಯ ಪಟ್ಟಿ ಕಟ್ಟಿಕೊಂಡ ತಾಲೂಕು ಇದಾಗಿದೆ. ಈ ಬರಪೀಡಿತ ಪ್ರದೇಶ ಎಂಬ ಪಟ್ಟಿ ಅಳಿಸಿ ಹಾಕಲು ರಾಜ್ಯ ಸರಕಾರ ಹಲವಾರು ಯೋಜನೆಗಳ ಮುಖಾಂತರ ತಾಲೂಕಿನ ಕೆಲವು ಭಾಗ ತಾಲೂಕಿನಲ್ಲಿ ಹರಿಯುತ್ತಿರುವ ಕೃಷ್ಣಾ ನದಿಯ ನೀರನ್ನು ಒದಗಿಸುವಲ್ಲಿ ಯಶಸ್ಸು ಕಂಡುಕೊಂಡಿದೆ.

ಅಥಣಿ ತಾಲೂಕಿನಲ್ಲಿ ಇರುವ ರೈತರು "ಹಾಸಿಗೆ ಇದ್ದಷ್ಟು ಕಾಲು ಚಾಚು" ಎಂಬ ಗಾದೆ ಮಾತಿನಂತೆ ತಮ್ಮಲ್ಲಿ ಇರುವ ಭೂಮಿಯನ್ನು ಸುಧಾರಣೆ ಮಾಡಿ ಜಮೀನಿನಲ್ಲಿ ನೀರಿನ ಮೂಲವನ್ನು ತಿಳಿದು ಭಾವಿ, ಕೊಳವೆ ಭಾವಿಯನ್ನು ತೋಡಿ ಅದೆ ನೀರನ್ನು ಉಪಯೋಗಿಸಿ ಕೆಲವು ಜನರು ಮಾರುಕಟ್ಟೆಗೆ ಬೇಕಾದ ತರಕಾರಿಗಳನ್ನು ಬೆಳೆಸುತ್ತಿದ್ದಾರೆ. ಹಾಗೂ ಕಡಿಮೆ ನೀರನ್ನು ಹೊಂದಿರುವ ತಾಲೂಕಿನ ರೈತರು ನೀರು ಸಂಗ್ರಹಣಾ ತೋಟ (ಕೃಷಿ ಹೊಂಡ) ನಿರ್ಮಾಣ ಮಾಡಿ ತಮ್ಮ ಕೃಷಿ ಅಭಿವೃದ್ಧಿ ಕ್ಷೇತ್ರದಲ್ಲಿ ಪ್ರತಿಭೆಗಳಿಸಿದ್ದಾರೆ.

ಉನ್ನತ ಮಟ್ಟದ ಶಿಕ್ಷಣವನ್ನು ಪಡೆದು ಹಲವಾರು ಯುವಕರು ಸರಿಯಾದ ಉದ್ಯೋಗ ಸಿಗದೇ ಒಂದು ಹೊತ್ತಿನ ಊಟಕ್ಕೂ ಗತಿ ಇಲ್ಲದೇ ಇದ್ದ ಸಂದರ್ಭದಲ್ಲಿ ಕೃಷಿಗೆ ಮೊರೆ ಹೊಂದ ಪದವಿ ಕೃಷಿಕರನ್ನು ನಾವು ಇಲ್ಲಿ ನೋಡಬಹುದು.

ಸಮಾಜದಲ್ಲಿ ನಡೆಯುತ್ತಿರುವ ಭಷ್ಟಾಚಾರ, ಅಭಿವೃದ್ಧಿಗೆ ಮಾರಕವಾದ ಅಂಶವಾಗಿದೆ. ಭ್ರಷ್ಟಾಚಾರ ಮುಕ್ತ ರಾಷ್ಟ್ರ ನಿರ್ಮಾಣ ಮಾಡುವಲ್ಲಿ ವಿಫಲವಾಗಿರುವ ಸಮಾಜ ನಮ್ಮದು ಎಂದು ಹೇಳಬಹುದು. ಭ್ರಷ್ಟಾಚಾರ, ನಿರುದ್ಯೋಗ ಹೀಗೆ ಹಲವಾರು ತೊಂದರೆಗೆ ಸಿಲುಕದ ದೂರವಿರುವ ವಿಚಾರವನ್ನು ಇಟ್ಟುಕೊಂಡ ಹಲವಾರು ಯುವಕರು ಕೃಷಿಯೇ ಉದ್ಯೋಗವೆಂದು ತಿಳಿದು ಅದರಲ್ಲಿ ಭಾಗಿಯಾಗಿದ್ದಾರೆ.

## ೨. ಅಧ್ಯಯನದ ಫಲಿತಗಳು

ಅಥಣಿ ತಾಲೂಕಿನ ನೀರಾವರಿ ಅಭಿವೃದ್ಧಿ ಅಧ್ಯಯನ ಈ ಅಧ್ಯಯನದಲ್ಲಿ ಅಥಣಿ ತಾಲೂಕಿನ ಗ್ರಾಮೀಣ ಭಾಗದ ನೀರಾವರಿ ವ್ಯವಸ್ಥೆಯನ್ನು ಹೊಂದಿ ನೀರಾವರಿ ಬಳಕೆದಾರರ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ಆರೋಗ್ಯದಲ್ಲಿ ಅಭಿವೃದ್ಧಿ ಹೊಂದಿರುವ ಹಾಗೂ ಕುಟುಂಬದ ಆರ್ಥಿಕ ನಿರ್ವಹಣೆಯಲ್ಲಿ ನೀರಾವರಿಯ ಪಾತ್ರ ಮತ್ತು ನೀರಾವರಿಯಲ್ಲಿನ ಬೆಳವಣಿಗೆ ಹಾಗೂ ರಾಷ್ಟ್ರದ ಅಭಿವೃದ್ಧಿಗೆ ರೈತನ ಕೊಡುಗೆ ಇವುಗಳ ಕುರಿತು ಸಮೀಕ್ಷೆಯ ಮೂಲಕ ಕಂಡುಕೊಂಡ ಅಂಶಗಳು ಈ ಕೆಳಗಿನಂತಿವೆ.

1. ವಯಸ್ಸಿನ ಪ್ರಮಾಣ : ೧೨ ರಿಂದ ೫೫ ವಯೋಮಾನದವರು ಕೃಷಿಯಲ್ಲಿ ತೊಡಗಿದ್ದು ಕಂಡು ಬರುತ್ತದೆ.

೨. ಶೈಕ್ಷಣಿಕ ಮಟ್ಟ : ಅಥಣಿ ತಾಲೂಕಿನಲ್ಲಿ ಇರುವ ನೀರಾವರಿ ಬೇಸಾಯದಲ್ಲಿ ೩೧.೨೫%ರಷ್ಟು ಜನರು ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಪಡೆದಿದ್ದಾರೆ ಹಾಗೂ ೧೨.೫%ರಷ್ಟು ಜನರು ಸ್ನಾತಕೋತರ ಪದವಿ ಪಡೆದಿರುವುದು ಮತ್ತು ೧೨.೫%ರಷ್ಟು ಜನ ಮಾತ್ರ ಅನಕ್ಷರತೆಯಿಂದ ಕುಂಡಿರುವುದು ಕಂಡು ಬರುತ್ತದೆ.

೩. ವೈವಾಹಿಕ ಸ್ಥಿತಿಗತಿ : ಈ ನೀರಾವರಿ ಬೇಸಾಯದಲ್ಲಿ ಹಲವಾರು ಯುವಕರು ದುಡಿಯುವದರ ಜೊತೆಗೆ ತಾವು ಮದುವೆಯಾಗಿ ತಮ್ಮ ಕುಟುಂಬವನ್ನು ಈ ವೃತ್ತಿಯಲ್ಲಿ ಸೇರಿಸಿಕೊಂಡು ವೃತ್ತಿ ಯಶಸ್ಸು ಕಂಡಿರುವುದು ಕಂಡು ಬರುತ್ತದೆ.

೪. ಭಾಷೆ : ಅಥಣಿ ತಾಲೂಕು ಮಹಾರಾಷ್ಟ್ರ ರಾಜ್ಯ ಗಡಿ ತಾಲೂಕು ಆಗಿರುವುದರಿಂದ ೩೧.೨೫%ರಷ್ಟು ಅಥಣಿ ತಾಲೂಕಿನಲ್ಲಿ ಮಾತೃ ಭಾಷೆ ಕನ್ನಡ ಜೊತೆಗೆ ಮರಾಠಿ, ಭಾಷೆಯನ್ನು ಕಲಿತಿರುವುದು. ಹಾಗೂ ರಾಷ್ಟ್ರ ಬಾಷೇ ಹಿಂದಿ, ಮಾತನಾಡುವದು ಕಂಡು ಬರುತ್ತದೆ.

೫. ಕುಟುಂಬದ ನಮೂನೆ : ನೀರಾವರಿ ಬೇಸಾಯುದಲ್ಲಿ ಇರುವ ಸಾಮಾನ್ಯ ಜನರಲ್ಲಿ ೬೨.೫% ರಷ್ಟು ಅವಿಭಕ್ತ ಕುಟುಂಬ, ನಮೂನೆ ಇತರೇ ೩೭.೫% ರಷ್ಟು ವಿಭಕ್ತ ಕಂಡು ಬರುತ್ತದೆ.

೬. ಆಸ್ತಿಯ ವಿವರ : ಅಥಣಿ ತಾಲೂಕಿನ ನೀರಾವರಿ ಬೇಸಾಯದಲ್ಲಿ ೫೩.೨೫%ರಷ್ಟು ಜನರು ೦೫ಎಕರೆಗಿಂತ್ತ ಕಡಿಮೇ ಆಸ್ತಿ ಹೊಂದಿರುವುದು. ೬.೨೫%ರಷ್ಟು ಜನರು ೨೫ಎಕರೆಗಿಂತ್ತ ಹೆಚ್ಚಿನ ಆಸ್ತಿ ಹೊಂದಿರುವುದು. ಆಸ್ತಿಗೆ ಅನುಕೂಲವಾಗುವಂತೆ ನೀರಾವರಿ ಮಾಡಿಕೊಂಡು ವ್ಯವಸಾಯ ಮಾಡುವುದು ಕಂಡು ಬರುತ್ತದೆ.

೭. ಮಣ್ಣು : ಬೇಸಾಯದಲ್ಲಿ ರೈತನ ಮೂಲಕರ್ತರು ಎಂದರೆ ಅಥಣಿ ತಾಲೂಕಿನಲ್ಲಿ ಹಲವಾರು ರೀತಿಯ ಫಲವತ್ತಾದ ಮಣ್ಣು ಕಂಡು ಬರುವುದು. ಉದಾ – ಕರಿ, ಕೆಂಪು, ಮಸಾರಿ, ಕರಿ

೮. ಸಂಚಾರ ವಾಣಿ : ನೀರಾವರಿ ಬೇಸಾಯದಲ್ಲಿ ಇರುವ ಎಲ್ಲಾ ಜನರು ಸಂಚಾರ ವಾಣಿಯನ್ನು ಬಳಸುತ್ತಿರುವುದು ಕಂಡು ಬರುತ್ತದೆ.

೯. ಅಕ್ಷರತೆ : ನೀರಾವರಿ ಬೇಸಾಯದ ಅಳವಡಿಕೆಯಿಂದ ತಮ್ಮ ಕುಟುಂಬದ ಎಲ್ಲಾ ಸದಸ್ಯರನಾಗಿ ಒಳ್ಳೇಯ ಶಿಕ್ಷಣ ನೀಡಿರುವುದು ಕಂಡು ಬರುತ್ತದೆ.

೧೦. ಪಾಲ್ಗೊಳ್ಳುವಿಕೆ : ನೀರಾವರಿ ಬೇಸಾಯದಲ್ಲಿ ತಮ್ಮ ಕುಟುಂಬದ ಎಲ್ಲಾ ಸದಸ್ಯರ ಪಾಲ್ಗೊಳ್ಳುವಿಕೆ ಕಂಡು ಬರುತ್ತದೆ.

೧೧. ನೀರಾವರಿ ಬೇಸಾಯದಲ್ಲಿ ಇರುವ ಜನರಲ್ಲಿ ಕಡಿಮೆ ಅನುಭವ ಇದ್ದರೂ ಅದು ತಂತ್ರಜ್ಞಾನದ ಅನುಭವ ಹೆಚ್ಚಿಗೆ ಇರುವುದು ಕಂಡು ಬರುತ್ತದೆ.

೧೨. ಹೆಚ್ಚಿನ ಆದಾಯಕ್ಕೆ ಮೊರೆ ಹೋದ ಜನ ನೀರಾವರಿ ಬೇಸಾಯಕ್ಕೆ ಬಂದಿರುವುದು.ಕಂಡು ಬರುತ್ತದೆ.

೧೩. ಸಹ ಉದ್ಯೋಗ : ನೀರಾವರಿ ಬೇಸಾಯ ಮಾಡುತ್ತಿರುವ ಜನರು ಹೈನುಗಾರಿಕೆ, ಕೋಳಿ ಸಾಕಾಣಿಕೆಯಂತಹ ಸಹ ಉದ್ಯೋಗ ಆಯ್ಕೆ ಮಾಡಿಕೊಂಡು ಅಧಿಕ ಆದಾಯ ಗಳಿಸುತ್ತಿರುವುದು ಕಂಡು ಬರುತ್ತದೆ.

೧೪. ನೀರಾವರಿ ಮೂಲ : ನೀರಾವರಿ ಬೇಸಾಯದಲ್ಲಿ ೫೬.೨೫%ರಷ್ಟು ಜನರು ಬಾವಿ ಹಾಗೂ ಕೊಳವೆ ಬಾವಿಗಳನ್ನು ಬಳಸುತ್ತಿರುವುದು. ೨೫%ರಷ್ಟು ಜನರು ಕೊಳವೆ ಬಾವಿಗಳ ಬಳಸುತ್ತಿರುವುದು ಕಂಡು ಬರುತ್ತದೆ.

೧೫. ಸಹಾಯ ಧನ : ನೀರಾವರಿ ಬೇಸಾಯದಲ್ಲಿ ನೀರಿನ ಮೂಳಗಳಿಗೆ ಅತೀ ಕಡಿಮೆ ಸಹಾಯ ಧನ ನೀಡಿದೆ ಎಂದು ಕಂಡು ಬರುತ್ತದೆ.

೧೬. ನೀರಾವರಿ ಪದ್ಧತಿ : ನೀರಾವರಿ ಪದ್ಧತಿಯಲ್ಲಿ ಮಲಚಿಂಗ ಪೇಪರ, ನೀರಾವರಿ ಹೆಚ್ಚಿಗೆ ಪ್ರಮಾಣದಲ್ಲಿ ಕಂಡು ಬರುತ್ತದೆ.

೧೭. ಕೃಷಿ ಯಂತ್ರೋಪಕರಣಗಳು : ನೀರಾವರಿ ಬೇಸಾಯದಲ್ಲಿ ಟ್ರ್ಯಾಕ್ಟರ ಬಳಕೆ ಹೆಚ್ಚಾಗಿರುವುದು ಕಂಡು ಬರುತ್ತದೆ.

೧೮. ಯಂತ್ರೋಪಕರಣಗಳ ಸಹಾಯ ಧನ : ಸಹಕಾರ ಸಂಘಗಳು, ಸಹಕಾರ ಬ್ಯಾಂಕು, ರಾಷ್ಟ್ರೀಯ ಬ್ಯಾಂಕುಗಳ ಸಹಾಯ ಸಾಲದ ರೂಪದಲ್ಲಿ ಹೆಚ್ಚಾಗಿರುವುದು ಕಂಡು ಬರುತ್ತದೆ.

೨೦. ನೀರು ಸಂಗ್ರಹಣೆ : ಕಡಿಮೆ ನೀರಿನ ಮೂಲವನ್ನು ಹೊಂದಿರುವ ಜನರು ಸರ್ಕಾರ ಯೋಜನೆಯಾದ ಕೃಷಿ ಹೊಂಡದ ನಿರ್ಮಿಸುವ ಯೋಜನೆಯ ಫಲಾನುಭವಿಗಳು ಕಂಡು ಬರುತ್ತಾರೆ.

೨೧. ಉದ್ಯೋಗ ಅವಕಾಶ : ನೀರಾವರಿ ಬೇಸಾಯದ ಮುಖ್ಯಸ್ಥರು ಹೆಚ್ಚಿನ ಪ್ರಮಾಣದ ಜನರಿಗೆ ಉದ್ಯೋಗ ನೀಡಿರುವುದು ಕಂಡು ಬರುತ್ತದೆ.

ಎ. ನೀಡಿರುವ ಕೆಲಸ : ಕಸ ತೆಗೆಯುವುದು, ಅರಿಷಿನ ಕಬ್ಬು, ದ್ರಾಕ್ಷಿ, ದಾಳಿಂಬೆ, ಮೆಣಸಿಗ ಗಿಡ, ಬದನೆಕಾಯಿ ಗಿಡ ಹಚ್ಚುವುದು, ಈ ರೀತಿ ಕೆಲಸ ನೀಡಿದ್ದಾರೆ ಎಂದು ಕಂಡು ಬರುತ್ತದೆ.

ಬಿ. ಸಂಬಳ ನೀಡುವುದು : ಸಮಾನ್ಯವಾಗಿ ಪುರುಷರಿಗೆ ೩೦೦, ೩೫೦ ರೂಪಾಯಿ, ಸ್ತ್ರೀಯರಿಗೆ ೧೫೦, ೨೦೦ ರೂಪಾಯಿ ಸಂಬಳ ನೀಡುವುದು ಕಂಡು ಬರುತ್ತದೆ.

೨೨. ಪ್ರಾರಂಭದ ಆದಾಯ ಮತ್ತು ನೀರಾವರಿ ಬೇಸಾಯದಲ್ಲಿ ಅತೀ ಕಡಿಮೆ ಆದಾಯ ಅಂದರೆ ರೂ.೧೦,೦೦೦/- ದಿಂದ ರೂ.೫೦,೦೦೦/- ಆದಾಯ ಬರುತ್ತಿರುವುದು ಕಂಡು ಬರುತ್ತದೆ.

೨೩. ನೀರಾವರಿ ಬೇಸಾಯದಲ್ಲಿ ಅತೀ ಹೆಚ್ಚಿನ ಆದಾಯ ಅಂದರೆ ರೂ. ೫,೦೦,೦೦೦ ರಿಂದ ರೂ.೨೦,೦೦,೦೦೦/- ಗಳಿಗಿಂತ ಆದಾಯ ಪಡೆಯುವುದು ಕಂಡು ಬರುತ್ತದೆ.

೨೪. ಆದಾಯದ ಬಳಕೆ : ಬೇಸಾಯದಿಂದ ಬಂದ ಆದಾಯವನ್ನು ಜನರು ಸಾಲ ತುಂಬುವದು, ಮಕ್ಕಳ ಶಿಕ್ಷಣ, ಮನೆಯ ನಿರ್ವಹಣೆಗೆ ಬಳಸುತ್ತಿರುವುದು ಕಂಡು ಬರುತ್ತದೆ.

೨೫. ನೀರಾವರಿ ಬಳಕೆದಾರರು, ತರಕಾರಿ, ದ್ರಾಕ್ಷಿ ಕಬ್ಬು, ಡಾಳಿಂಬೆ ಬೆಳೆಗಳನ್ನು ಅತೀ ಹೆಚ್ಚಾಗಿ ಬೆಳೆಯುತ್ತಿರುವುದು ಕಂಡು ಬರುತ್ತದೆ.

೨೬. ನೀರಾವರಿ ಪೂರ್ವದ ಬೆಳೆಗಳು : ಸಜ್ಜೆ, ಜೋಳ, ಹುರಳಿ, ಶೇಂಗಾ, ನೀರಾವರಿ ಪೂರ್ವದ ಬೆಳೆಗಳಾಗಿ ಕಂಡು ಬರುತ್ತದೆ.

೨೭. ತಕರಾರ ಬಿಟ್ಟು ಉಳಿದ ಎಲ್ಲಾ ಬೆಳೆಗಳನ್ನು ವರ್ಷಕ್ಕೆ ಒಂದೇ ಬಾರಿ ಬೆಳೆಯುತ್ತಿರುವುದು ಕಂಡು ಬರುತ್ತದೆ.

೨೮. ದ್ರಾಕ್ಷಿ ಬೆಳೆಯಿಂದ ಹೆಚ್ಚಿನ ಆದಾಯ ಕಂಡು ಬರುವುದು.

೨೯. ಪೂರ್ವ ಮಾಹಿತಿ ಇಲ್ಲದೇ ಇರುವುದರಿಮದ ಹಾನಿಯಾಗುತ್ತಿರುವುದು ಕಂಡು ಬರುತ್ತದೆ.

೩೦. ಹಾನಿಯಾದ ಸಂದರ್ಭದಲ್ಲಿ: ಸರಕಾರದ ಯಾವುದೇ ಯೋಜನೆ ಸಂಪೂರ್ಣವಾಗಿ ಹಂಚಿಕೆಯಾಗದೇ ಇರುವುದು ಕಂಡು ಬರುತ್ತದೆ.

೩೧. ಯಾವುದೇ ತರಬೇತಿ ಇಲ್ಲದೇ ಕೃಷೀಯಲ್ಲಿ ಪಾಲ್ಗೊಳ್ಳುವಿಕೆ ಕಂಡು ಬರುತ್ತದೆ.

೩೨. ಎಸ್.ಟಿ.ಪಿ. (**Spanning Tree Protocol**) ಮೂಲಕ ರಾಸಾಯನಿಕ ಸಿಂಪಡಿಸುವಿಕೆ ಕಂಡು ಬರುತ್ತದೆ.

**೩. ಸಲಹೆ ಸೂಚನೆಗಳು**

೧ ಜಾತಿಯಾದಾರದ ಮೇಲೆ ಅನುಷ್ಠಾನಗೊಳ್ಳುತ್ತಿರುವ ಯೋಜನೆಗಳು. ಬಡತನವನ್ನು ಹೊಂದ್ದಿದ ಜಾತಿಯಾದಾರದ ಮೇಲೆ ಮಾಪನ ಮಾಡಿದ ನೈಜ ಆರ್ಥಿಕ ಪರಿಸ್ಥಿತಿಯ ಮೇಲೆ ಮಾಪನ ಮಾಡಬೇಕು.

೨ ನೀರಾವರಿ ಯೋಜನೆಗಳ ಹಂಚಿಕೆ ಮತ್ತು ಅನುಷ್ಠನ ಪ್ರಾಮಾಣಿಕವಾಗಿರಬೇಕು.

೩ ನೀರಾವರಿ ಬೇಸಾಯದಲ್ಲಿ ಬರುವ ವಸ್ತುಗಳು ಹೆಸರಿಗೆ ಮಾತ್ರ ರಿಯಾಯಿತಿ ಯಾಗಿರಬಾರದು.

೪ ಸರ್ವಕಾಲಿಕ ಕಾಲುವೆಗೆ ಹೆಚ್ಚಿನ ಒತ್ತು ನೀಡಬೇಕು.

೫ ಹೆಚ್ಚಿನ ತರಬೇತಿ ಕಾರ್ಯಕ್ರಮ ನಡೆಸಬೇಕು. ಅವು ಹತ್ತಿರದ ಪ್ರದೇಶದಲ್ಲಿರ ಬೇಕು.

೬ ರೈತ ಮಕ್ಕಳ ಶಿಕ್ಷಣಕ್ಕೆ ಶಿಕ್ಷಣ ಇಲಾಖೆಯಿಂದ ಕಲಿಸುವ ಯೋಜನೆಯು ಬರೀ ದಾಖಲೆ ವರದಿಗಳಿಗೆ ಮೀಸಲಾಗಿರುವಂತೆ ಮಾಡದೇ ಪರಿಣಾಮಕಾರಿಯಾಗಿ ನಡೆಯುವಂತೆ ಆಯೋಜನೆ ಮಾಡಬೇಕು.

೭ ವಲಸೆ ಹೊಗುತ್ತಿರುವ ರೈತರ ಬಗ್ಗೆ ಹೊಸ ಯೋಜನೆಗಳ ನಿರ್ಮಾಣವಾಗ ಬೇಕು.

೮ ಕೃಷಿಯಲ್ಲಿ ಯಂತ್ರೋಪಕರಣಗಳ ಬಳಕೆಯ ಬಗ್ಗೆ ತರಬೇತಿ ಕಾರ್ಯಾಗಾರ ಏರ್ಪಡಿಸಬೇಕು..

೯ ಕೃಷಿ ಯಂತ್ರೋಪಕರಣಗಳ ಸಾಲ ಸೌಲಭ್ಯ ಸೂಕ್ತ ಸಮಯದಲ್ಲಿ ದೊರೆಯವಂತಾಗಬೇಕು.

೧೦ ಬೆಳೆಗಳ ಮೇಲೆ ವಿಮೆ ಸೌಲಭ್ಯ ಕಡ್ಡಾಯವಾಗಿ ನೀಡಬೇಕು.

೧೧ ಬರಿದಾದ ಕೋಳವೆ ಬಾವಿಗಳಿಂದ ಸಂಭವಿಸುವ ಅನಾಹುತದ ಬಗ್ಗೆ ಜಾಗೃತಿ ಮೂಡಿಸಲು ಕಾರ್ಯಕ್ರಮ ರೂಪಿಸಬೇಕು.

೧೨ ಕೇಂದ್ರ ಹಾಗೂ ರಾಜ್ಯ ಸರಕಾರದ ಯೋಜನೆಗಳ ಯಾದಿ ಎಲ್ಲಾ ಜನರಿಗೆ ತಿಳಿಯುವಂತೆ ಜಾಹಿರಾತು ನೀಡಬೇಕು.

೧೩ ಆಡಳಿತ ಕಛೇರಿಯಲ್ಲಿ ಅಧಿಕಾರಿಗಳು ಪೂರ್ಣ ಪ್ರಮಾಣದ ಮಾಹಿತಿ ನೀಡಲು ಕ್ರಮ ಕೈಗೊಳ್ಳಬೇಕು.

೧೪ ಮಳೆ ಇರದ ದಿನಗಳಲ್ಲಿ ಗ್ರಾಮಗಳನ್ನು ಆಯ್ಕೆ ಮಾಡಿಕೊಂಡು ಅಲ್ಲಿರುವ ಯುವಕರನ್ನು ಸ್ವಉದ್ಯೋಗಿಗಳನ್ನಾಗಿ ನಿರ್ಮಾಣ ಮಾಡಲು ಸರಕಾರ ಸಂಘ ಸಂಸ್ಥೆಗಳನ್ನು ಪ್ರಾರಂಭಿಸಿ ಸ್ವ ಉದ್ಯೋಗ ತರಬೇತಿ ನೀಡಬೇಕು.

೧೫ ಬೆಳೆದ ಬೆಳೆಯನ್ನು ಶೇಕರಿಸಿಡಲು ಉಗ್ರಾಣ ಸೇವೆ ಕಲ್ಪಿಸಬೇಕು.

೧೬ ಬೆಳೆ ಹಾನಿ ಪರಿಹಾರವು ಸರಿಯಾದ ಸಮಯದಲ್ಲಿ ತಲುಪುವಂತಾಗಬೇಕು.

೧೭ ರೈತ ಮಕ್ಕಳಿಗೆ ಉನ್ನತ ಶಿಕ್ಷಣ ನೀಡಲು ವಿಶೇಷವಾದ ಮೀಸಲಾತಿ ಯೋಜನೆಯ ರೂಪಿಸಿ ಸಹಾಯ ಧನ ನೀಡಬೇಕು.

೧೮ ಬೀಜ ಸಂರಕ್ಷಣೆ, ಎರೆ ಹುಳು ಸಾಕಾಣಿಕೆ, ಸಾವಯವ ಗೊಬ್ಬರ ತಯಾರಿಕೆ, ಆಧುನಿಕ ಹೈನುಗಾರಿಕೆ, ಜಾನುವಾರು ತಳಿ ತಯಾರಿಕೆ, ಹಾಗೂ ಇತರೆ ಕೌಶಲ್ಯಹೊಂದ್ದಿರು ಉತ್ಸಾಹಿ ಯುವಕರಿಗೆ ಪ್ರೋತ್ಸಾಹ ನೀಡಿಬೇಕು.

೧೯ ಗ್ರಾಮೀಣ ಭಾಗದಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರ ಸ್ಥಾಪಣೆಯಾಗಬೇಕು.

೨೦ ಏತ ನೀರಾವರಿ ಯೋಜನೆಯ ಮೂಲಕ ನೀರನ್ನು ಒದಗಿಸಲು ವ್ಯವಸ್ಥೆಯಲ್ಲಿ ಕಾಲುವೆಯ ಅಂತ್ಯದವರೆಗೂ ನೀರು ತಲುಪಿಸಲು ವ್ಯವಸ್ಥೆ ಮಾಡಬೇಕು.

೨೧ ರೈತರು ಬೆಳೆದ ಬೆಳೆಗಳಿಗೆ ಸೂಕ್ತವಾದ ಬೆಲೆ ಸಿಗುವ ವ್ಯವಸ್ಥೆ ಮಾಡಬೇಕು.

೨೨ ಸ್ಥಳೀಯ ಮಾರುಕಟ್ಟೆಯ ವ್ಯವಸ್ಥೆ ಅತೀ ಅವಶ್ಯಕವೆನಿಸುತ್ತದೆ. ಅದಕ್ಕಾಗಿ ಸ್ಥಳೀಯ ಮಾರುಕಟ್ಟೆ ರಚನೆಯಾಗಬೇಕು.

೨೩ ಗ್ರಾಮಗಳ ಸಮೀಪವೆ ಮಣ್ಣು, ನೀರು, ಬೀಜಗಳ ಪರೀಕ್ಷಾ ಕೇಂದ್ರಗಳನ್ನು ನಿರ್ಮಾಣ ಮಾಡಬೇಕು.

೨೪ ಸಣ್ಣ ರೈತರಿಗೆ ಸಾಲ ಸೌಲಭ್ಯ ಒದಗಿಸಬೇಕು.

೨೫ ನೀರಾವರಿ ಪದ್ಧತಿಯಲ್ಲಿ ಬರುವ ತುಂತುರು ನೀರಾವರಿ, ಹನಿ ನೀರಾವರಿ, ಮಲಚಿಂಗ ಪೇಪರ ನೀರಾವರಿ ಅಳವಡಿಸಲು ಸಹಾಯ ಧನ ನೀಡಬೇಕು.

೨೬ ಆಧುನಿಕ ಯುಗದಲ್ಲಿ ಇರುವ ಕೃಷಿ ಯಂತ್ರೋಪಕರಣಗಳ ಬಳಕೆ ಮಾಡುವಂತೆ ಮಾರ್ಗದರ್ಶನ ನೀಡಬೇಕು.

೨೭ ಇಲಾಖೆಯಿಂದ ಗ್ರಾಮಗಳಲ್ಲಿ ಸಭೆ ಕರೆದು ಗ್ರಾಮದ ಜನರಿಗೆ ಮಾಹಿತಿ ನೀಡುವ ಕಾರ್ಯಾಗಾರ ನಡೆಸಬೇಕು.

೨೮ ಸಮಾಜದಲ್ಲಿ ಇರುವ ಎಲ್ಲಾ ಜನರಿಗೆ ಅಂತರ್ಜಲದ ಬಗ್ಗೆ ಮಾಹಿತಿ ನೀಡಿ ಅಂತರ್ಜಲ ಹೆಚ್ಚಿಸಲು ವಿಶೇಷ ಘಟಕ ಸ್ಥಾಪನೆಯಾಗಬೇಕು.

೨೯ ನೀರಾವರಿ ಕೆರೆಗಳ ನಿರ್ಮಾಣ ಮಾಡಿ ನೀರು ಬಳಕೆದಾರರ ಸಂಘಕ್ಕೆ ಪ್ರೋತ್ಸಾಹ ನೀಡಬೇಕು.

೩೦ ನಗರ – ಪಟ್ಟಣಗೊಳೊಂದಿಗೆ ಗ್ರಾಮೀಣ ವಲಯದಲ್ಲೂ ಮಳೆ ನೀರು ಸಂಗ್ರಹ ಕಡ್ಡಾಯವಾಗಬೇಕು.

೩೧ ಕೊಳವೆ ಭಾವಿಗಳನ್ನು ನಿಷೇಧಿಸಬೇಕು. ನೀರು ನಿಂತು ಅಂತರ್ಜಲ ಹೆಚ್ಚಿಸುವ ಕೆರೆ, ಭಾವಿಗಳು ನಿರ್ಮಾಣವಾಗಬೇಕು.

೩೨ ನೀರಿನಲ್ಲಿ ಫ್ಲೋರೈಡ ಅಂಶ ಹೆಚ್ಚಿರುವ ಕಡೆ ದೊಡ್ಡ – ದೊಡ್ಡ ಕೆರೆ ಭಾವಿಗಳನ್ನು ನಿರ್ಮಿಸಿ ಮಳೆ ನೀರು ಸಂಗ್ರಹಿಸಬೇಕು.

೩೩ ನಮ್ಮೂರು ಕೆರೆಯ ಸಂರಕ್ಷಣಾ ಜವಾಬ್ದಾರಿ ನಾವೆ ಹೊರಬೇಕು. ಕೆರೆಗಳ ಸಂರಕ್ಷಣೆಗೆ ಊರಿಗೆ ಜನರ ಸಮಿತಿ ನೇಮಿಸಬೇಕು.

೩೪ ಸರಕಾರವು ನೀರಾವರಿಯ ಬೃಹತ ಯೋಜನೆಗಳನ್ನು ಕೈ ಬಿಟ್ಟು ಕಿರು ಯೋಜನೆಗಳತ್ತ ಗಮನ ಹರಿಸಬೇಕು.

೩೫ ಮಳೆ ನೀರು ಕೊಯ್ಲು ಕುರಿತು ದೇಶಾದ್ಯಂತರ ಜನ ಜಾಗೃತಿ ಮೂಡಿಸಬೇಕು.

೩೬ ಕೆರೆ, ಭಾವಿಗಳ, ಜೀರ್ಣೋಧ್ಧಾರ, ಹೊಸ ಕೆರೆಗಳ ನಿರ್ಮಾಣ ಆಗಬೇಕು.

೩೭ ಕೃಷಿ ಹೊಂಡಗಳು, ಒಡ್ಡುಗಳ ನಿರ್ಮಾಣ ಹರಿದು ಹೋಗುವ ನೀರು ನಿಂತು ಹೋಗದಂತೆ ಹೊಲಗಳಲ್ಲಿ ಬದು (ಸಾಲು)ಗಳ ನಿರ್ಮಾಣ ಮಾಡುವಂತಹ ನೀರು ಸಂಗ್ರಹ ವಿಧಾನಗಳನ್ನು ರೈತರಿಗೆ ತಿಳಿಸಿಕೊಟ್ಟು ಅನುಸರಿಸುವಂತೆ ಉತ್ತೇಜಿಸಬೇಕು.

೩೮ ಅಂತರಾಜ್ಯ ನದಿ ನೀರು ಹಂಚಿಕೆ ವಿವಾದಗಳನ್ನು ಸೌಹಾರ್ದಯುತವಾಗಿ ಬಗೆಹರಿಸಿಕೊಂಡು, ರಾಜ್ಯಗಳು ತಂತಮ್ಮ ಪಾಲಿನ ನೀರನ್ನು ಸಮರ್ಥವಾಗಿ ಬಳಸಿಕೊಳ್ಳಬೇಕು.

೩೯ ನೀರಾವರಿ ಕಾಮಗಾರಿಗಳು ಭ್ರಷ್ಟಾಚಾರ ಮುಕ್ತವಾಗಿರಬೇಕು ಮತ್ತು ರಾಜಕೀಯ ಪ್ರಭಾವಕ್ಕೆ ಒಳಗಾಗುವುದು.

೪೦ ನಮ್ಮ ರಾಜ್ಯದಲ್ಲಿ ಯಾವುದೇ ಪಕ್ಷದ ರಾಜ್ಯಭಾರವಿದ್ದರೂ ನಮ್ಮ ರಾಜ್ಯದ ರೈತರ ಹಿತಾಸಕ್ತಿಯೇ ಮುಖ್ಯವೆಂಬುದನ್ನು ನಮ್ಮ ರಾಜಕಾರಿಣಿಗಳು ಅರಿಯಬೇಕು. ವೈಯಕ್ತಿಕ ಅಥವಾ ಪಕ್ಷದ ಹಿತ ಎಂದೆಂದಿಗೂ ಪ್ರಾಮುಖ್ಯತೆ ಪಡೆಯಬಾರದು. ಇದಕ್ಕೆ ಬಲವಾದ ರಾಜಕೀಯ ಇಚ್ಛಾಶಕ್ತಿಬೇಕು.

೪೧ ರೈತರು ಅನಾವಶ್ಯಕವಾಗಿ ಹೆಚ್ಚು ನೀರನ್ನು ಹೊಲ ಗದ್ದೆಗಳಿಗೆ ಬಿಟ್ಟು ನೀರನ್ನು ವ್ಯರ್ಥಗೊಳಿಸುತ್ತಾರೆ. ರೈತರೂ ಈ ಬಗ್ಗೆ ಎಚ್ಚೆತ್ತುಕೊಳ್ಳಬೇಕು.

೪೨ ಎರೆ ಮಣ್ಣಿನ ಭೂಮಿಯಲ್ಲಿ ಕಬ್ಬು, ಭತ್ತ ಇತ್ಯಾದಿ ಹೆಚ್ಚು ನೀರನ್ನು ಬಯಸುವ ಬೆಳೆಗಳನ್ನು ಬೆಳೆಯಲೇಬಾರದು. ಮೊದಲ ಕೆಲ ವರ್ಷಗಳಲ್ಲಿ ರೈತರ ಜೇಬು ತುಂಬಿದರೂ ನಂತರ ಭೂಮಿ ಜೌಗು ಹಿಡಿದು ಹಾಳಾಗುತ್ತದೆ. ಈಗಾಗಲೇ ಸಾವಿರಾರು ಎಕರೆ ಭೂಮಿ ಜೌಗು ಹಿಡಿದು ನಿರುಪಯುಕ್ತವಾಗಿದೆ. ಕೃಷ್ಣಾ ಮೇಲ್ದಂಡೆ ಯೋಜನೆಯ ಅಚ್ಚುಕಟ್ಟು ಪ್ರದೇಶದಲ್ಲಿ ಮುಂಜಾಗ್ರತಾ ಕ್ರಮಗಳನ್ನು ಕೈಗೊಳ್ಳಬೇಕು.

೪೩ ಎಕರೆಗನುಗುಣವಾಗಿ ನೀರು ಕಂದಾಯವನ್ನು (Water Tax) ವಿಧಿಸುವುದರ ಬದಲಾಗಿ, ಬಳಸುವ ನೀರಿನ ಪರಿಮಾಣಕ್ಕನುಗುಣವಾಗಿ ನೀರು ಕಂದಾಯವನ್ನು ವೈಜ್ಞಾನಿಕವಾಗಿ ರೈತನಿಗೆ ಹೊರೆಯಾಗದಂತೆ ವಿಧಿಸಬೇಕು.

೪೪ ಎಲ್ಲಾ ಅಚ್ಚುಕಟ್ಟು ಪ್ರದೇಶಗಳಲ್ಲಿ ಒಂದೊಂದು ವಿತರಣ ಕಾಲುವೆ ಅಥವಾ ಉಪ ಕಾಲುವೆಯ ಅಚ್ಚುಕಟ್ಟುದಾರರ ಸಂಘಗಳನ್ನು ಸ್ಥಾಪಿಸಿ ನೀರಿನ ಬಳಕೆಯನ್ನು ಸಮಗೊಳಿಸಬೇಕು.

೪೫ ಎಲ್ಲಾ ಕೆರೆಗಳ ಸಂರಕ್ಷಣೆ ವ್ಯಾಪಕವಾಗಿ ನಡೆಯಬೇಕು. ಕೆರೆಗಳ ಹೂಳನ್ನು ಎತ್ತುವಾಗ ವೈಜ್ಞಾನಿಕವಾಗಿ ವಿಶ್ಲೇಷಿಸಿ ಜಾಗರೂಕತೆಯಿಂದ ಪೂರ್ಣಗೊಳಿಸಬೇಕು.

ಅಂತರ್ಜಲ ಬಳಕೆಯ ಮೇಲೆ ಯಾವುದೇ ಕಾನೂನಿನ ನಿಯಂತ್ರವಿಲ್ಲದ್ದರಿಂದ ಇಂದು ರಾಜ್ಯ ಹಲವೆಡೆ ಅಂತರ್ಜಲ ಮಟ್ಟ ಕುಸಿದಿದೆ. ಕುಸಿಯುತ್ತಲೂ ಇದೆ. ಆದ್ದರಿಂದ ಸೂಕ್ತವಾದ ಆ ಕಾನೂನನ್ನು ರೂಪಿಸಿ ಅನುಷ್ಠಾನಗೊಳಿಸಬೇಕು. ಅಂತರ್ಜಲ ಮಾಲಿನ್ಯವನ್ನು ತಡೆಗಟ್ಟುವದಕ್ಕೆ ಇದರಲ್ಲಿ ಅವಕಾಶವಿರಬೇಕು.

ಈಗಾಗಲೇ ಅಂತರ್ಜಲಕ್ಕೆ ಕೃತಕ ಮರು ಭರ್ತಿಯ ಕಾರ್ಯಕ್ರಮಗಳು ಆರಂಭವಾಗಿವೆ (Artificial Recharge) ಇವು ಇನ್ನಷ್ಟು ವ್ಯಾಪಕವಾಗಿ ಹಣ ಪೋಲಾಗದಂತೆ ಅನುಸ್ಥಾನಗೊಳಿಸಬೇಕು.

ನೀರು ನಿಸರ್ಗವು ನಮಗೆ ನೀಡಿರುವ ಅತ್ಯಂತ ಅಮೂಲ್ಯ ವಸ್ತು ಇದು ಬಂಗಾರ ಬೆಳ್ಳಿಗಿಂತಲೂ ಹೆಚ್ಚು ಅಮೂಲ್ಯ. ಈ ನೈಸರ್ಗಿಕ ಸಂಪತ್ತು ಸೀಮಿತವಾಗಿದೆ. ಆದರೆ ನಮ್ಮ ಜನಸಂಖ್ಯೆ ಮತ್ತು ನೀರಿನ ಬೇಡಿಕೆ ದಿನೇ ದಿನೇ ಬೆಳೆಯುತ್ತಿವೆ. ಆದ್ದರಿಂದ ನಮ್ಮ ಬೇಡಿಕೆಗಳನ್ನು ಸೀಮಿತಗೊಳಿಸಿ ಸಮೃದ್ಧಿಯನ್ನು ಪಡೆಯಬೇಕು. ಆದದರಿಂದ ಕವಿ ಬೇಂದ್ರೆಯವರ ಸುಪ್ರಸಿದ್ದ ಕವನದ ಸಾಲುಗಳನ್ನು ಕೊಂಚ ಮಾರ್ಪಡಿಸಿ ಕೆಳಗಿನಂತೆ ಹೇಳಬಹುದು.

ಜಲವೇ ಜನನ

ನಿರ್ಜಲವೇ ಮರಣ

ಸಮ ಜಲವೇ ಜೀವನ. . . . .

## ಅನುಬಂಧಗಳು

ಅಭಿವೃದ್ಧಿ ಅಧ್ಯಯನ ವಿಭಾಗದಲ್ಲಿ
ಎಂ. ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಸಾದರ ಪಡಿರುವ
ಸಂಶೋಧನಾ ಸಂಪ್ರಬಂಧದ ಪ್ರಶ್ನಾವಳಿಗಳ ಅನುಸೂಚಿ

**೧. ಸಣ್ಣ ನೀರಾವರಿ ಬಳಕೆದಾರರಿಗೆ ಪ್ರಶ್ನಾವಳಿ**

೧. ಹೆಸರು. : ____________

೨. ವಯಸ್ಸು : ____________

೩. ಶಿಕ್ಷಣ. : ____________

೪. ವಿಳಾಸ : ____________

೫. ಸಂಪರ್ಕಿಸುವ ದೂರವಾಣಿ ಸಂಖ್ಯೆ : ____________

೬. ವೈವಾಹಿಕ ಸ್ಥಿತಿಗತಿ : ____________

೭. ಭಾಷೆ : ____________

೮. ಕುಟುಂಬದ ನಮೂನೆ : ____________

೯. ನೀವು ಹೊಂದಿರುವ ಆಸ್ತಿ : ____________

೧೦. ನಿಮ್ಮ ಭೂಮಿಯ ಮಣ್ಣು : ____________

೧೧. ನಿಮ್ಮ ಮನೆಯಲ್ಲಿ ಎಷ್ಟು ಜನ ಅನಕ್ಷರಸ್ಥರು : ____________

೧೨. ನಿಮ್ಮ ಮನೆಯಲ್ಲಿ ಎಷ್ಟು ಜನ ಅಕ್ಷರಸ್ಥರು : ____________

೧೩. ಕೃಷಿಯಲ್ಲಿ ಎಷ್ಟು ಜನ ಪಾಲಗೊಂಡಿದ್ದಿರಿ : ____________

೧೪. ಎಷ್ಟು ವರ್ಷದಿಂದ ಈ ಕೃಷಿಯಲ್ಲಿ ತೋಡಗಿದ್ದಿರಿ : ____________

೧೫. ಮೋದಲು ಮಾಡುತ್ತಿರುವ ಕೆಲಸ ಯಾವುದು : ____________

೧೬. ಇದರ ಜೋತೆ ನೀವು ಆಯ್ಕೆ ಮಾಡಿಕೊಂಡಿರುವ ಸಹ ಉದ್ಯೋಗಗಳು ಮಾಡಿಕೋಂಡಿದ್ದಿರಾ..

ಉದಾಹರಣೆ

ಅ. ಹೈನುಗಾರಿಕೆ ಆ. ಮೀನುಗಾರಿಕೆ

ಇ. ತೋಟಗಾರಿಕೆ ಈ. ಕೋಳಿಸಾಗಾಣಿಕೆ

ಉ. ಆಡು ಸಾಕಾಣಿಕೆ ಊ. ಸಾವಯವಗೊಬ್ಬರ ತಯಾರಿಕೆ

ಎ. ಇತರೆ

೧೭ ನೀಮ್ಮ ನೀರಾವರಿಯ ಮೂಲ ಯಾವುದು

ಉದಾಹರಣೆ : ಬಾವಿ, ಕೊಳವೆ ಬಾವಿ,
ಕೆರೆ, ಹಳ್ಳ, ನದಿ. ಕೃಷಿ ಹೊಂಡ ಇತ್ಯಾದಿಗಳು

೧೮ ಅವುಗಳ ಸಂಖ್ಯೆ : ____________

೧೯ ಅವುಗಳು ಸ್ವಂತವೆ : ____________

೨೦ ಅವುಗಳಲ್ಲಿ ಪಾಲುಗಾರ : ____________

೨೧ ಅವುಗಳಿಗೆ ಸಹಾಯ ನೀಡಿದ್ದಾರೆಯೆ.

ಉದಾಹರಣೆಗಾಗಿ ಎ ಸರಕಾರದ ಯೋಜನೆಯಡಿ

(ಯಾವ ಯೋಜನೆಯಡಿ)

ಬಿ ಅರೆ ಸರಕಾರದ ಯೋಜನೆಯಡಿ

(ಯಾವ ಯೋಜನೆಯಡಿ)

ಸಿ ಇತರೆ

೨೨ ನೀಮ್ಮ ನೀರಾವರಿ ವ್ಯವಸ್ಥೆ ಯಾವುದು.

ಎ ಸಂಪ್ರದಾಯ ನೀರಾವರಿಯೆ

ಬಿ ಕಾಲುವೆ ನೀರಾವರಿಯೆ

ಸಿ ಮಡಿಕೆ ನೀರಾವರಿಯೆ

ಡಿ ಹನಿ ನೀರಾವರಿಯೆ

ಇ ತುಂತುರು ನೀರಾವರಿ

ಎಪ್. ಮಲಚಿಂಗ್ ಪೀಪರ ನೀರಾವರಿ

ಜಿ ಇತರೆ

೨೩ ಕೃಷಿಯಲ್ಲಿ ಯಂತ್ರೋಪಕರಣ ಉಪಯೋಗ ಮಾಡುತ್ತಿದ್ದಿ

ಉದಾರಹಣೆ ಅ. ಟ್ರಾಕ್ಟರ ಆ ಎಸ್.ಟಿ.ಪಿ

ಇ ಇತರೆ

೨೪ ಅವುಗಳಿಗೆ ಸಹಾಯ ನೀಡಿದ್ದಾರೆಯೆ.

ಎ ಸರಕಾರದ ಯೋಜನೆಯಡಿ

(ಯಾವ ಯೋಜನೆಯಡಿ)

ಬಿ ಅರೆ ಸರಕಾರದ ಯೋಜನೆಯಡಿ

(ಯಾವ ಯೋಜನೆಯಡಿ)

ಸಿ ರೀಯಾಯಿತಿ ದರದಲ್ಲಿ

ಡಿ ಇತರೆ

೨೫ ನೀರಿನ ಸಂರಕ್ಷಣೆ ಮಾಡುತ್ತಿರಾ

ಎ ಮಳೆನೀರಿನ ಕೊಯ್ಲು

ಬಿ ಇಂಗು ಗುಂಡಿಯ ಮೂಲಕ

ಸಿ ಕೃಷಿ ಹೋಂಡ

ಸಿ ಇತರೆ

೨೬ ನೀವು ಉದ್ಯೋಗ ಅವಕಾಶ ನೀಡಿದ್ದಿರಾ

ಹೌದಾದರೆ

ಅ ನೀವು ಎಷ್ಟು ಜನರಿಗೆ

ಆ ನೀಡಿರುವ ಕೆಲಸ ಯಾವುದು

ಇ ನೀವು ನೀಡುವ ಸಂಭಳ ಎಷ್ಟು

೨೭ ಪ್ರಾರಂಭದಲ್ಲಿ ನಿಮ್ಮಗೆ ಬರುತ್ತಿರುವ ಆದಾಯ : ________

೨೮ ಪ್ರಚಲಿತದಲ್ಲಿ ನಿಮ್ಮಗೆ ಬರುತ್ತಿರುವ ಆದಾಯ : ________

೨೯ ಬಂದ ಆದಾಯ ಎನು ಮಾಡುತ್ತಿರಿ

ಅ ಆಸ್ತಿ ಖರೀದಿ

ಆ ಮರು ಬಂಡವಾಳ

ಇ ಮನೆ ಖರ್ಚು

ಈ ಯಂತ್ರೋಪಕರಣ ಖರೀದಿ

ಉ ಇತರೆ

೩೦ ನೀವು ಈಗ ಬೆಳೆಯುತ್ತಿರುವ ಬೆಳೆಗಳಾವವು : ________

೩೧ ಮೋದಲು ಬೆಳೆಯುತ್ತಿದ್ದ ಬೆಳೆಗಳಾವವು : ________

೩೨ ವರ್ಷಕ್ಕೆ ಎಷ್ಟು ಬಾರಿ ಬೆಳೆಬೆಳೆಯುತ್ತಿರಿ : ________

೩೩ ಯಾವ ಬೆಳೆಯಿಂದ ಹೆಚ್ಚಿನ ಲಾಭ ಬರುತ್ತದೆ : ________

೩೪ ಯಾವಾಗಾದರು ಬೆಳೆ ಹಾನಿ ಯಾಗಿದ್ದಿಯೆ ?

ಹೌದಾದರೆ ಯಾವರೀತಿ

ಅ ಮಳೆಯಿಂದ ಆ ರೋಗದಿಂದ

ಇ ನೀರಿನಿಂದಾ ಈ ಪೂರ್ವ ಮಾಹಿತಿ ಇಲ್ಲದೆ

ಉ ಇತರೆ

೩೫ ಹಾನಿಯಾದ ಸಮಯದಲ್ಲಿ ಸಹಾಯ ಪಡೆದಿದ್ದಿರಾ

ಹೌದಾದರೆ

ಎ ಸರಕಾರದ ಯೋಜನೆಯಡಿ

(ಯಾವ ಯೋಜನೆಯಡಿ)

ಬಿ ಅರೆ ಸರಕಾರದ ಯೋಜನೆಯಡಿ

(ಯಾವ ಯೋಜನೆಯಡಿ)

ಸಿ ವಿಮೆ

ಡಿ ಇತರೆ

೩೬ ಹೆಚ್ಚು ವೆಚ್ಚ ತಗಲುವ ಬೆಳೆ ಯಾವುದು : ____________

೩೭ ಕಡಿಮೆ ವೆಚ್ಚ ತಗಲುವ ಬೆಳೆ ಯಾವುದು : ____________

೩೮ ಇದಕ್ಕೆ ನೀವು ಪಡೆದುಕೊಂಡಿರುವ ತರಬೇತಿ ವಿವರ.

೩೯ ತಂತ್ರಜ್ಞಾನ ನೀರಾವರಿ ವ್ಯವಸ್ಥೆ

೪೦ ಈ ಸಣ್ಣ ನೀರಾವರಿಯಿಂದಾಗಿ ಒಟ್ಟಾರೆ ನೀಮ್ಮ ಒಂದು

೧. ಅಭಿಪ್ರಾಯಗಳು

೨. ಸಲಹೆ ಸೂಚನೆಗಳು

೩. ಸರಕಾರಕ್ಕೆ ಸಲಹೆಗಳು

## ೨. ಗ್ರಾಮಗಳು ಮತ್ತು ಜನಸಂಖ್ಯೆಯ ವಿವರ (೨೦೧೧ರ ಜನಗಣತಿ ಪ್ರಕಾರ ಮಾಹಿತಿ)

| ಅ ನಂ | ಗ್ರಾಮಗಳ ಹೇಸರು | ಒಟ್ಟು ಜನಸಂಖ್ಯೆ | ಪುರುಷರು | ಮಹಿಳೆಯರು |
|---|---|---|---|---|
| ೧ | ಪಾಂಡೆಗಾವ | ೨೧೦೭ | ೧೦೪೨ | ೧೦೬೫ |
| ೨ | ಖಿಳೇಗಾಂವ | ೩೫೧೫ | ೧೭೮೫ | ೧೭೩೦ |
| ೩ | ಆಜೂರ | ೨೮೩೧ | ೧೪೩೨ | ೧೩೯೯ |
| ೪ | ಅನಂತಪೂರ | ೮೧೨೩ | ೪೧೬೮ | ೩೯೫೫ |
| ೫ | ಮಲಾಬಾದ | ೪೧೧೭ | ೨೦೭೩ | ೨೦೪೪ |
| ೬ | ಬೆವನೂರ | ೨೩೧೨ | ೧೧೮೨ | ೧೧೩೦ |
| ೭ | ತಾವಂಶಿ | ೨೪೦೧ | ೧೨೨೫ | ೧೧೭೬ |
| ೮ | ನಾಗನೂರ ಪಿ ಎ | ೨೦೩೦ | ೧೦೪೭ | ೯೮೩ |
| ೯ | ಶಿರೂರ | ೨೩೮೫ | ೧೨೦೨ | ೧೧೮೩ |
| ೧೦ | ಸಂಬರಗಿ | ೪೧೧೬ | ೨೦೯೩ | ೨೦೨೩ |
| ೧೧ | ಅರಳಿಹಟ್ಟಿ | ೨೧೪೮ | ೧೦೯೨ | ೧೦೫೬ |
| ೧೨ | ಬಮ್ಮನಾಳ | ೧೪೪೮ | ೭೫೬ | ೬೯೨ |
| ೧೩ | ವಿಷ್ಣುವಾಡಿ | ೧೯೯೯ | ೧೦೪೧ | ೯೫೮ |
| ೧೪ | ಜಕ್ಕಾರಟ್ಟಿ | ೨೬೯೫ | ೧೩೭೨ | ೧೩೨೩ |
| ೧೫ | ಜಂಬಗಿ | ೩೬೫೩ | ೧೮೯೪ | ೧೭೫೯ |
| ೧೬ | ಕಲ್ಲೂತಿ | ೧೨೫೪ | ೬೪೫ | ೬೦೯ |
| ೧೭ | ಕೀರಣಗಿ | ೩೩೭೪ | ೧೭೪೯ | ೧೬೨೫ |
| ೧೮ | ಬಾಳಿಗೇರಿ | ೫೧೯೬ | ೨೬೫೪ | ೨೪೪೨ |
| ೧೯ | ಗುಂಡೇವಾಡಿ | ೫೧೭೬ | ೨೬೩೩ | ೨೫೪೩ |
| ೨೦ | ಶಿವನೂರ | ೨೬೫೦ | ೧೩೭೪ | ೧೨೭೬ |
| ೨೧ | ಮದಭಾವಿ | ೮೧೧೯ | ೪೧೭೨ | ೩೯೪೭ |
| ೨೨ | ತೇವರಟ್ಟಿ | ೧೫೨೬ | ೭೯೮ | ೭೨೮ |

| | | | | |
|---|---|---|---|---|
| ೨೩ | ಸಿದ್ದೇವಾಡಿ | ೩೬೭೫ | ೧೮೮೮ | ೧೭೮೭ |
| ೨೪ | ಹಣಮಾಪೂರ | ೧೮೩೬ | ೯೪೯ | ೮೮೭ |
| ೨೫ | ಅಗ್ರಾಣಿ ಇಂಗಳಗಾಂವ | ೧೦೧೮ | ೫೧೨ | ೫೦೬ |
| ೨೬ | ಅಬ್ಬಿಹಾಳ | ೧೧೪೮ | ೫೮೬ | ೫೬೨ |
| ೨೭ | ಪಾರ್ಥನಹಳ್ಳಿ | ೪೫೬೨ | ೨೪೦೧ | ೨೧೬೧ |
| ೨೮ | ಮಾನಟ್ಟಿ | ೭೧೯ | ೩೮೦ | ೩೩೯ |
| ೨೯ | ಚಮಕೇರಿ | ೩೧೫೪ | ೧೬೪೭ | ೧೫೦೭ |
| ೩೦ | ಬೇಡರಹಟ್ಟಿ | ೧೧೪೫ | ೬೦೩ | ೫೪೨ |
| ೩೧ | ಕಾಗವಾಡ | ೧೩೯೩೬ | ೭೧೪೮ | ೬೭೮೮ |
| ೩೨ | ಮಂಗಾವತಿ | ೧೯೪೫ | ೧೦೦೨ | ೯೪೩ |
| ೩೩ | ಜೂಗಳ | ೮೮೨೭ | ೪೪೬೫ | ೪೩೬೨ |
| ೩೪ | ಶಹಾಪೂರ | ೧೧೭೭ | ೫೯೩ | ೫೮೪ |
| ೩೫ | ಶಿರಗುಪ್ಪಿ | ೯೬೮೩ | ೪೯೪೨ | ೪೭೪೧ |
| ೩೬ | ಮೋಳವಾಡ | ೩೪೪೬ | ೧೭೦೭ | ೧೭೩೯ |
| ೩೭ | ಕುಸ್ನಾಳ | ೨೩೯೩ | ೧೨೧೬ | ೧೧೭೭ |
| ೩೮ | ಉಗಾರ ಬದ್ರುಕ | ೧೦೨೭೬ | ೫೩೦೫ | ೪೯೭೧ |
| ೩೯ | ಉಗಾರ ಖುರ್ದ | ೨೦೮೦೪ | ೧೦೫೯೨ | ೧೦೨೧೨ |
| ೪೦ | ಪರಿದಖಾನವಾಡಿ | ೨೯೫೮ | ೧೫೨೯ | ೧೪೨೯ |
| ೪೧ | ಶೇಡಬಾಳ | ೧೫೨೭೮ | ೭೭೫೨ | ೭೫೨೬ |
| ೪೨ | ಲೋಕೂರ | ೩೪೬೨ | ೧೭೭೬ | ೧೬೮೬ |
| ೪೩ | ಮಂಗಸೂಳಿ | ೧೨೪೩೨ | ೬೩೭೧ | ೬೦೬೧ |
| ೪೪ | ಕೇಂಪವಾಡ | ೪೦೩೩ | ೨೦೭೩ | ೧೯೬೦ |
| ೪೫ | ನವಲಿಹಾಳ | ೧೭೫೨ | ೮೮೧ | ೮೭೧ |
| ೪೬ | ಕೌಲಗುಡ್ಡ | ೧೪೭೯ | ೭೫೬ | ೭೨೩ |
| ೪೭ | ಮೋಳೆ | ೧೨೧೫೩ | ೬೩೨೫ | ೫೮೨೮ |

| ೪೮ | ಕಾತ್ರಾಳ | ೧೮೧೩ | ೯೩೩ | ೮೮೦ |
|---|---|---|---|---|
| ೪೯ | ಐನಾಪೂರ | ೧೮೯೧೩ | ೯೫೫೫ | ೯೩೫೮ |
| ೫೦ | ಕೃಷ್ಣಾ ಕಿತ್ತೂರ | ೫೨೧೭ | ೨೬೮೦ | ೨೫೩೭ |
| ೫೧ | ಬನಜವಾಡ | ೧೨೮೦ | ೬೬೮ | ೬೧೨ |
| ೫೨ | ಮುರಗುಂಡಿ | ೩೨೨೭ | ೧೬೨೭ | ೧೬೦೦ |
| ೫೩ | ಮಸರಗುಪ್ಪಿ | ೨೧೩೧ | ೧೦೮೪ | ೧೦೪೭ |
| ೫೪ | ದೇವರಡ್ಡೇರಹಟ್ಟಿ | ೧೧೦೪ | ೫೮೦ | ೫೨೪ |
| ೫೫ | ಅಥಣಿ ಗ್ರಾಮೀಣ | ೧೩೯೯೬ | ೭೨೫೫ | ೬೭೪೧ |
| ೫೬ | ತಂಗಡಿ | ೨೧೭೫ | ೧೧೨೨ | ೧೦೫೩ |
| ೫೭ | ಶಿನ್ನಾಳ | ೧೨೫೧ | ೬೩೮ | ೬೧೩ |
| ೫೮ | ಸಂಕೋನಟ್ಟಿ | ೭೨೮೬ | ೩೬೯೦ | ೩೫೯೬ |
| ೫೯ | ಹುಲಗಬಾಳ | ೮೩೫೯ | ೪೨೯೦ | ೪೦೬೯ |
| ೬೦ | ನದಿ ಇಂಗಳಗಾಂವ | ೫೦೭೦ | ೨೫೯೨ | ೨೪೭೮ |
| ೬೧ | ತಿರ್ಥ | ೨೩೫೯ | ೧೨೦೬ | ೧೧೫೩ |
| ೬೨ | ಸಪ್ತ ಸಾಗರ | ೪೩೫೨ | ೨೨೩೭ | ೨೧೧೫ |
| ೬೩ | ಚಿಕ್ಕೂಡ | ೧೨೨೯ | ೬೩೧ | ೫೯೮ |
| ೬೪ | ದರೂರ | ೫೬೮೧ | ೨೮೭೮ | ೨೮೦೩ |
| ೬೫ | ಹಲ್ಯಾಳ | ೫೧೬೯ | ೨೬೫೦ | ೨೫೧೯ |
| ೬೬ | ಅವರಖೋಡ | ೩೪೩೭ | ೧೭೮೨ | ೧೬೫೫ |
| ೬೭ | ನಾಗನೂರ ಪಿಕೆ | ೨೪೬೨ | ೧೨೬೬ | ೧೧೯೬ |
| ೬೮ | ಖವಟಖೋಪ್ಪ | ೩೩೦೭ | ೧೬೬೮ | ೧೬೩೯ |
| ೬೯ | ಶಂಕರಹಟ್ಟಿ | ೨೭೧೬ | ೧೩೮೮ | ೧೩೨೮ |
| ೭೦ | ಶೇಗುಣಸಿ | ೬೩೩೩ | ೩೨೬೨ | ೩೦೭೧ |
| ೭೧ | ದೋಡವಾಡ | ೭೩೧ | ೩೭೪ | ೩೫೭ |
| ೭೨ | ಸತ್ತಿ | ೯೯೮೪ | ೫೧೩೪ | ೪೮೫೦ |

| ೭೩ | ರಡ್ಡೇರಹಟ್ಟಿ | ೫೧೩೪ | ೨೬೦೧ | ೨೫೩೩ |
|---|---|---|---|---|
| ೭೪ | ನಂದೇಶ್ವರ | ೪೧೨೧ | ೨೦೮೫ | ೨೦೩೬ |
| ೭೫ | ಮಹೇಶವಾಡಗಿ | ೩೪೦೮ | ೧೭೪೩ | ೧೬೬೫ |
| ೭೬ | ಝುಂಜರವಾಡ | ೩೫೫೮ | ೧೮೧೦ | ೧೭೪೮ |
| ೭೭ | ಸವದಿ | ೭೯೭೭ | ೪೦೮೩ | ೩೮೯೪ |
| ೭೮ | ರಾಮತೀರ್ಥ | ೧೬೮೬ | ೮೭೬ | ೮೧೦ |
| ೭೯ | ಕಕಮರಿ | ೫೫೫೯ | ೨೭೮೮ | ೨೭೨೧ |
| ೮೦ | ಕೋಟ್ಟಲಗಿ | ೫೭೮೦ | ೨೯೪೨ | ೨೮೩೮ |
| ೮೧ | ಬನ್ನೂರ | ೧೫೫೩ | ೭೮೪ | ೭೬೯ |
| ೮೨ | ತೆಲಸಂಗ | ೧೦೫೯೨ | ೫೪೧೧ | ೫೧೮೧ |
| ೮೩ | ಕನ್ನಾಳ | ೧೮೦೧ | ೯೨೦ | ೮೮೧ |
| ೮೪ | ಪಡತರವಾಡಿ | ೨೧೨೧ | ೧೦೬೮ | ೧೦೫೩ |
| ೮೫ | ಐಗಳಿ | ೮೨೫೯ | ೪೨೦೩ | ೪೦೫೬ |
| ೮೬ | ಕೋಹಳ್ಳಿ | ೬೫೯೪ | ೩೩೩೦ | ೩೨೬೪ |
| ೮೭ | ಕೇಸಕರದಡ್ಡಿ | ೧೨೩೫ | ೬೬೬ | ೫೬೯ |
| ೮೮ | ಅಡಹಳಟ್ಟಿ | ೩೬೬೭ | ೧೯೫೦ | ೧೭೧೭ |
| ೮೯ | ಅಡಹಳ್ಳಿ | ೨೯೭೩ | ೧೫೦೨ | ೧೪೭೧ |
| ೯೦ | ಯಲಿಹಡಲಗಿ | ೩೮೮೬ | ೧೯೭೨ | ೧೯೧೪ |
| ೯೧ | ಯಕ್ಕಂಚ್ಚಿ | ೨೫೨೫ | ೧೩೫೩ | ೧೧೭೨ |
| ೯೨ | ಬಡಚಿ | ೩೯೮೫ | ೨೦೪೪ | ೧೯೪೧ |
| ೯೩ | ದೇಸಾರಟ್ಟಿ | ೨೩೯೪ | ೧೨೦೯ | ೧೧೮೫ |
| ೯೪ | ಖೋತನಟ್ಟಿ | ೧೬೦೭ | ೮೩೪ | ೭೭೩ |
| ೯೫ | ಅರಟಾಳ | ೩೨೩೬ | ೧೬೮೩ | ೧೫೫೩ |
| ೯೬ | ಹಾಲಳ್ಳಿ | ೩೧೦೫ | ೧೫೯೧ | ೧೫೧೪ |
| ೯೭ | ಬಾಡಗಿ | ೨೯೩೦ | ೧೪೮೪ | ೧೪೪೬ |

| | | | | |
|---|---|---|---|---|
| ೯೮ | ಯಲ್ಲಮ್ಮವಾಡಿ | ೧೯೯೩ | ೧೦೧೫ | ೯೭೮ |
| ೯೯ | ದಬದಬಹಟ್ಟಿ | ೧೯೯೩ | ೧೦೦೨ | ೯೯೧ |
| ೧೦೦ | ಕೋಕಟನೂರ | ೭೬೮೯ | ೩೮೩೪ | ೩೮೫೫ |
| ೧೦೧ | ಬುರ್ಲಟ್ಟಿ | ೧೪೪೪ | ೭೬೧ | ೬೮೩ |
| ೧೦೨ | ಕಟಗೇರಿ | ೩೧೨೭ | ೧೫೬೫ | ೧೫೬೨ |
| ೧೦೩ | ಕೋಗಾನೂರ | ೨೪೧೧ | ೧೨೫೪ | ೧೧೫೭ |
| ೧೦೪ | ನಂದಗಾಂವ | ೭೨೦೨ | ೩೬೩೧ | ೩೫೭೧ |
| ೧೦೫ | ಘಟನಟ್ಟಿ | ೧೯೬೮ | ೧೦೨೭ | ೯೪೧ |
| ೧೦೬ | ಬಳವಾಡ | ೧೩೫೮ | ೭೦೧ | ೬೫೭ |
| ೧೦೭ | ಶಿರಹಟ್ಟಿ | ೫೭೨೬ | ೨೯೦೫ | ೨೮೨೧ |
| ೧೦೮ | ಜನವಾಡ | ೪೦೬೨ | ೨೧೧೩ | ೧೯೪೯ |
| ೧೦೯ | ಸುಟ್ಟಟ್ಟಿ | ೩೪೩೩ | ೧೭೭೫ | ೧೬೫೮ |
| | **ಒಟ್ಟು** | **೪,೭೭,೯೯೦** | **೨,೪೪,೫೩೩** | **೨,೩೩,೪೫೭** |

## ೩. ನೀರಾವರಿ ಮೂಲಗಳಯಾದಿ

### ೧. ಅಥಣಿ ತಾಲೂಕಿನಲ್ಲಿ ಕೆರೆಗಳ ವಿವರ

(ಸಣ್ಣ ನೀರಾವರಿ ಇಲಾಖೆಯ ವೇಬ್‌ಸೈಟ್‌ನಲ್ಲಿ / ಸಣ್ಣ ನೀರಾವರಿ ಇಲಾಖೆ ಕಚೇರಿ ಮಾಹಿತಿ ಪ್ರಕಾರ)

| ಅ ನಂ | ಸಣ್ಣ ನೀರಾವರಿ ಯೋಜನೆಗಳ ಹೆಸರು | ಗ್ರಾಮ | ಸಾಮರ್ಥ್ಯ (ಎಂ.ಸಿ.ಎಫ್.ಟಿ) | ಅಚ್ಚುಕಟ್ಟು (ಹೆಕ್ಟೇರ) |
|---|---|---|---|---|
| ೧ | ಮಧಬಾವಿ ಸಣ್ಣ ನೀರಾವರಿ ಕೆರೆ | ಮಧಬಾವಿ | ೨೧.೧೬ | ೧೩೦.೦೦ |
| ೨ | ಚಮಕೇರಿ ಸಣ್ಣ ನೀರಾವರಿ ಕೆರೆ | ಚಮಕೇರಿ | ೧೬.೪೩ | ೧೨೪.೦೦ |
| ೩ | ಕೋಹಳ್ಳಿ ಸಣ್ಣ ನೀರಾವರಿ ಕೆರೆ | ಕೋಹಳ್ಳಿ | ೭೫.೭೩ | ೬೧೩.೦೦ |
| ೪ | ಅರಟಾಳ ಸಣ್ಣ ನೀರಾವರಿ ಕೆರೆ | ಅರಟಾಳ | ೭.೨೦ | ೧೫೭.೦೦ |
| ೫ | ಯಲ್ಲಮನವಾಡಿ ಸಣ್ಣ ನೀರಾವರಿ ಕೆರೆ | ಕೋಕಟನೂರ | ೪೫.೪೪ | ೨೬೦.೦೦ |
| ೬ | ಐಗಳಿ ಸಣ್ಣ ನೀರಾವರಿ ಕೆರೆ | ಐಗಳಿ | ೪೪.೩೩ | ೩೫೬.೦೦ |
| ೭ | ಬೇವನೂರ ಸಣ್ಣ ನೀರಾವರಿ | ಬೇವನೂರ | ೮.೫೯ | ೭೮.೦೦ |
| ಒಟ್ಟು | | | ೨೧೮.೮೮ | ೧೭೧೮.೦೦ |

### ೨. ಅಥಣಿ ತಾಲೂಕಿನಲ್ಲಿ ಜಿನಗು ಕೆರೆಗಳ ವಿವರ

| ಅ ನಂ | ಸಣ್ಣ ನೀರಾವರಿ ಯೋಜನೆಗಳ ಹೆಸರು | ಸಾಮರ್ಥ್ಯ (ಎಂ.ಸಿ.ಎಫ್.ಟಿ) | ಅಚ್ಚುಕಟ್ಟು (ಹೆಕ್ಟೇರ) |
|---|---|---|---|
| ೧ | ಯಲಿಹಡಗಲಿ ಸಣ್ಣ ನೀರಾವರಿ ಕೆರೆ | ೨೫.೦೧ | ೧೦೨.೦೦ |
| ೨ | ಅನಂತಪೂರ ಸಣ್ಣ ನೀರಾವರಿ ಕೆರೆ | ೧೦.೭೦ | ೧೬೩.೦೦ |
| ೩ | ಅಡಹಳಟ್ಟಿ ಸಣ್ಣ ನೀರಾವರಿ ಕೆರೆ | ೨೪.೦೦ | ೧೦೨.೦೦ |
| ೪ | ಚಿಕ್ಕಟ್ಟಿ ಸಣ್ಣ ನೀರಾವರಿ ಕೆರೆ | ೩.೫೦ | ೧೦೨.೦೦ |
| ೫ | ಪಡತರವಾಡಿ ಸಣ್ಣ ನೀರಾವರಿ ಕೆರೆ | ೩.೨೪ | ೧೦೬.೦೦ |
| ೬ | ಮಧಬಾವಿ ನೀರಾವರಿ ಕೆರೆ | ೨.೫೦ | ೧೩೦.೦೦ |

| | | | |
|---|---|---|---|
| ೭ | ಕೋಹಳ್ಳಿ ಸಣ್ಣ ನೀರಾವರಿ ಕೆರೆ | ೮.೭೧ | ೧೨೫.೦೦ |
| ೮ | ಘಟನಟ್ಟಿ ಸಣ್ಣ ನೀರಾವರಿ ಕೆರೆ | ೬.೬೩ | ೧೦೬.೦೦ |
| ೯ | ನಂದಗಾಂವ ಸಣ್ಣ ನೀರಾವರಿ ಕೆರೆ | ೯.೧೦ | ೯೮.೦೦ |
| ೧೦ | ಗೇಜ್ಜನ ಖೋಡಿ ಸಣ್ಣ ನೀರಾವರಿ ಕೆರೆ | ೫.೫೦ | ೭೭.೦೦ |
| ೧೧ | ಬಡಚಿ ಸಣ್ಣ ನೀರಾವರಿ ಕೆರೆ | ೧೧.೦೪ | ೯೦.೦೦ |
| ೧೨ | ಬಡಚಿ ಸಣ್ಣ ನೀರಾವರಿ ಕೆರೆ | ೧೦.೧೮ | ೬೭.೦೦ |
| ೧೩ | ಮಂಗಸೂಳಿ ಸಣ್ಣ ನೀರಾವರಿ ಕೆರೆ | ೬.೩೦ | ೫೦.೦೦ |
| ೧೪ | ಮಂಗಸೂಳಿ ಸಣ್ಣ ನೀರಾವರಿ ಕೆರೆ | ೬.೩೦ | ೪೮.೦೦ |
| ೧೫ | ಭರಮಖೋಡಿ ಸಣ್ಣ ನೀರಾವರಿ ಕೆರೆ | ೧೦.೫೦ | ೯೨.೦೦ |
| ೧೬ | ಗುಂಡೇವಾಡಿ ಸಣ್ಣ ನೀರಾವರಿ ಕೆರೆ | ೪.೩೦ | ೫೨.೦೦ |
| ೧೭ | ಗುಂಡೇವಾಡಿ ಸಣ್ಣ ನೀರಾವರಿ ಕೆರೆ | ೬.೫೭ | ೭೪.೦೦ |
| ೧೮ | ಪಾರ್ಥನಳ್ಳಿ ಸಣ್ಣ ನೀರಾವರಿ ಕೆರೆ | ೬.೯೮ | ೫೯.೦೦ |
| ೧೯ | ಪಾರ್ಥನಳ್ಳಿ ಸಣ್ಣ ನೀರಾವರಿ ಕೆರೆ | ೩.೬೨ | ೪೮.೦೦ |
| ೨೦ | ಅರಟಾಳ (ವಜ್ರನಾಳ) ಸಣ್ಣ ನೀರಾವರಿ ಕೆರೆ | ೧೪.೨೪ | ೫೮ |
| ೨೧ | ಜಕಾರಟ್ಟಿ ಸಣ್ಣ ನೀರಾವರಿ ಕೆರೆ | ೬.೩೪ | ೭೨.೦೦ |
| ೨೨ | ಅರಳಿಹಟ್ಟಿ ಸಣ್ಣ ನೀರಾವರಿ ಕೆರೆ | ೩.೮೦ | ೪೩.೦೦ |
| ೨೩ | ಮಧಬಾವಿ ಸಣ್ಣ ನೀರಾವರಿ ಕೆರೆ | ೫.೯೧ | ೪೩.೦೦ |
| ೨೪ | ಲೋಕೂರ ಸಣ್ಣ ನೀರಾವರಿ ಕೆರೆ | ೫.೩೫ | ೭೮.೦೦ |
| ೨೫ | ಕಕಮರಿ ಸಣ್ಣ ನೀರಾವರಿ ಕೆರೆ | ೯.೦೦ | ೮೧.೦೦ |
| ೨೬ | ಅಡಹಳ್ಳಿ ಸಣ್ಣ ನೀರಾವರಿ ಕೆರೆ | ೩.೪೩ | ೬೦.೦೦ |

| ೨೭ | ಬಡಚಿ ಜಿನಗು ಕೆರೆ | ೪.೫೦ | ೬೮.೦೦ |
|---|---|---|---|
| ೨೮ | ಅರಟಾಳ (ಬನ್ನದಾಲಾ) ಸಣ್ಣ ನೀರಾವರಿ ಕೆರೆ | ೧೦.೦೪ | ೧೫೭.೦೦ |
| ೨೯ | ಪಡತರವಾಡಿ ಪಿಟಿ | ೫.೧೭ | ೮೨.೦೦ |
| ೩೦ | ಹಾಲಹಳ್ಳಿ ಪಿ ಟಿ | ೩೬.೦೦ | ೩೬.೦೦ |
| ೩೧ | ಕಕಮರಿ ಪಿ ಟಿ | ೪೦.೦೦ | ೪೦.೦೦ |
| ೩೨ | ಕೋಟ್ಟಲಗಿ ಪಿ ಟಿ | ೪೦.೦೦ | ೪೦.೦೦ |
| ೩೩ | ಚಮಕೇರಿ ಸಣ್ಣ ನೀರಾವರಿ ಕೆರೆ | ೧೬.೪೩ | ೧೨೪.೦೦ |
| ೩೪ | ಅರಟಾಳ ಸಣ್ಣ ನೀರಾವರಿ ಕೆರೆ | ೭.೨೦ | ೧೫೭.೦೦ |
| ೩೫ | ಐಗಳಿ ಸಣ್ಣ ನೀರಾವರಿ ಕೆರೆ | ೪೪.೩೩ | ೩೫೬.೦೦ |
| ೩೬ | ಕೋಹಳ್ಳಿ ಸಣ್ಣ ನೀರಾವರಿ ಕೆರೆ | ೭೫.೭೩ | ೬೧೩.೦೦ |
| ೩೭ | ಯಲ್ಲಮವಾಡಿ ಸಣ್ಣ ನೀರಾವರಿ ಕೆರೆ | ೪೫.೪೪ | ೨೬೦.೦೦ |
| | | **ಒಟ್ಟು** | **೪೦೪೫.೩೦** |

**೩. ಅಥಣಿ ತಾಲೂಕಿನಲ್ಲಿ ಬರುವ ಒಟ್ಟು ಏತ ನೀರಾವರಿ ಯೋಜನೆಗಳ ವಿವರ.**

| ಅ ನಂ | ಸಣ್ಣ ನೀರಾವರಿ ಯೋಜನೆಗಳ ಹೆಸರು | ಗ್ರಾಮ | ಅಚ್ಚುಕಟ್ಟು |
|---|---|---|---|
| ೧ | ನಧಿ ಇಂಗಳಗಾಂವ ಏತ ನೀರಾವರಿ | ಇಂಗಳಗಾಂವ | ೧೭೦.೦೦ |
| ೨ | ದರೂರ ಏತ ನೀರಾವರಿ | ದರೂರ | ೭೦೦.೦೦ |
| ೩ | ಸತ್ತಿ ಏತ ನೀರಾವರಿ | ಸತ್ತಿ | ೨೫೯.೦೦ |
| ೪ | ಹೊಸಟ್ಟಿ ಏತ ನೀರಾವರಿ | ಹೊಸಟ್ಟಿ | ೧೫೨.೦೦ |
| ೫ | ಲೋಕುರ ಏತ ನೀರಾವರಿ ೧ ಸ್ಟೇಜ್ | ಲೋಕುರ | ೧೬೮.೦೦ |

| ೬ | ಲೋಕುರ ಏತ ನೀರಾವರಿ ೨ ಸ್ಟೇಜ್ | ಲೋಕುರ | ೧೮೩.೦೦ |
|---|---|---|---|
| ೭ | ಲೋಕುರ ಏತ ನೀರಾವರಿ ೩ ಸ್ಟೇಜ್ | ಲೋಕುರ | ೧೨೨.೦೦ |
| ೮ | ಲೋಕುರ ಏತ ನೀರಾವರಿ ೪ ಸ್ಟೇಜ್ | ಲೋಕುರ | ೧೬೯.೯೮ |
| ೯ | ಕಾಗವಾಡ ಏತ ನೀರಾವರಿ | ಕಾಗವಾಡ | ೧೦೬.೦೦ |
| | | ಒಟ್ಟು | ೧೧೯೭.೦೦ |

೪. ಅಥಣಿ ತಾಲೂಕಿನಲ್ಲಿ ಬರುವ ಒಟ್ಟು ಬಾಂದಾರ/ಬ್ಯಾರೇಜ್/ಬಿಸಿಬಿ ವಿವರ.

| ಅ ನಂ | ಸಣ್ಣ ನೀರಾವರಿ ಯೋಜನೆಗಳ ಹೆಸರು | ಸಾಮರ್ಥ್ಯ (ಎಂ.ಸಿ.ಎಫ್.ಟಿ) | ಅಚ್ಚುಕಟ್ಟು |
|---|---|---|---|
| ೧ | ಅಜೂರ ಬಾಂದಾರ | ೧೬೫.೦೦ | ೮೧೦.೦೦ |
| ೨ | ಕಲೂತಿ ಬಾಂದಾರ | ೨೫೮.೦೦ | ೧೨೫೫.೦೦ |
| ೩ | ಐಗಳಿ ಬಾಂದಾರ | ೧೦.೭೦ | ೨.೮೦ |
| ೪ | ಬೇವನೂರ ಬಾಂದಾರ | ೫.೦೦ | ೪೮.೬೦ |
| ೫ | ಉಗಾರ ಬ್ಯಾರೇಜ್ | ೪೦೦.೦೦ | ೧೪೯೮.೦೦ |
| ೬ | ಬುರ್ಲಟ್ಟಿ ಬ್ಯಾರೇಜ್ | ೧೦.೦೦ | ೪೦.೦೦ |
| ೭ | ಆಬ್ಬೀಹಾಳ ಬ್ಯಾರೇಜ್ | ೧೦.೦೦ | ೧೮.೦೦ |
| ೮ | ಮಲಾಭಾದ ಬ್ಯಾರೇಜ್ | ೧೦.೦೦ | ೧೮.೦೦ |
| ೯ | ಶೀರೂರ ಸಂಬರಗಿ ಬ್ಯಾರೇಜ್ | ೧೦.೬೬೮ | ೬೮.೦೦ |
| ೧೦ | ಕೊಕಟನೂರ ಬ್ಯಾರೇಜ್ | ೧೦.೦೦ | ೪೧.೦೦ |
| ೧೧ | ಸುಟ್ಟಟ್ಟಿ ಬಾಂದಾರ | ೧೬.೫೨ | ೫೬.೦೦ |

| ೧೨ | ಶಿವನೂರ ಬಾಂದಾರ | ೧೬.೨೬ | ೫೭.೦೦ |
|---|---|---|---|
| ೧೩ | ವಡ್ರಟ್ಟಿ ಬಿ.ಸಿ.ಸಿ | ೦ | ೧೩೪.೦೦ |
| ೧೪ | ಕೋಹಳ್ಳಿ ಬ್ಯಾರೇಜ್ | ೧೦.೧೪ | ೪೦.೮೯ |
| ೧೫ | ಕೋತನಟ್ಟಿ ಬ್ಯಾರೇಜ್ | ೧೨.೮೯ | ೪೦.೦೦ |
| ೧೬ | ಆಜೂರ ಬಾಂದಾರ (ಆಜೂರ) | ೧೨.೩೩ | ೪೭.೦೦ |
| ೧೭ | ಬಾಡಗಿ ಬ್ಯಾರೇಜ್ | ೯.೭೮ | ೪೫.೦೦ |
| ೧೮ | ಕೆಂಪವಾಡ ಬ್ಯಾರೇಜ್ | ೧೦.೦೦ | ೪೦.೦೦ |
| ೧೯ | ಐನಾಪೂರ ಶೇಡಬಾಳ ಬಿ.ಸಿ.ಬಿ | ೫೦.೦೦ | ೫೦.೦೦ |
| ೨೦ | ಕಾಲೋಟಿ ಹತ್ತಿರ ಬಿ.ಸಿ.ಬಿ | ೮೩.೦೦ | ೮೩.೦೦ |
| ೨೧ | ಕಿರಣಗಿ ಹತ್ತಿರ ಬ್ಯಾರೇಜ್ ಸೈಟ್-೧ | ೭೬.೦೦ | ೪೫.೦೦ |
| ೨೨ | ಕಾಲೋಟಿ ಬ್ಯಾರೇಜ್ ಸೈಟ್ | ೧೦೯.೦೦ | ೧೦೯.೦೦ |
| ೨೩ | ಬೆವನೂರ ಬ್ಯಾರೇಜ್ | ೬೪.೦೦ | ೬೪.೦೦ |
| ೨೪ | ಮಂಗಸೂಳಿ ಹತ್ತಿರ ಬಿ.ಸಿ.ಬಿ | ೫೮.೦೦ | ೫೮.೦೦ |
| ೨೫ | ಹೊಸಟ್ಟಿ ಬಾಂದಾರ | ೬೦.೦೦ | ೬೦.೦೦ |
| ೨೬ | ಎಲಿಹಡಲಗಿ ಬ್ಯಾರೇಜ್ | ೫೨.೦೦ | ೫೨.೦೦ |
| ೨೭ | ದೇಸಾರಟ್ಟಿ ಬಿ.ಸಿ.ಬಿ | ೬೦.೦೦ | ೬೦.೦೦ |
| ೨೮ | ಅಡಹಳ್ಳಿ ಬ್ಯಾರೇಜ್ | ೫೫.೦೦ | ೫೫.೦೦ |
| ೨೯ | ಕೋಹಳ್ಳಿ ಸೈಟ-೩ ಬ್ಯಾರೇಜ್ | ೫೩.೦೦ | ೫೩.೦೦ |
| ೩೦ | ಇಂಗಳಗಾಂವ ಬ್ಯಾರೇಜ್ | ೯೧.೦೦ | ೯೧.೦೦ |
| ೩೧ | ನಾಗನೂರ ಬಿ.ಸಿ.ಬಿ | ೮೩.೦೦ | ೮೩.೦೦ |

| | | | |
|---|---|---|---|
| ೩೨ | ಚಂದ್ರಪ್ಪನವಾಡಿ ಬ್ಯಾರೇಜ್ | ೮೦.೦೦ | ೮೦.೦೦ |
| ೩೩ | ತಂಗಡಗಿ ಬಂದಾರ | ೪೫.೦೦ | ೪೫.೦೦ |
| ೩೪ | ಕಿರಣಗಿ ಹತ್ತರ ಬ್ಯಾರೇಜ್ ಸೈಟ್-೧ | ೪೫.೦೦ | ೪೫.೦೦ |
| ೩೫ | ಯಲಿಹಡಲಗಿ ಬ್ಯಾರೇಜ್ | ೭.೩೫ | ೫೦.೦೦ |
| ೩೬ | ಕೇಪ್ಪಟ್ಟಿ ಬಿಸಿಬಿ | ೧೦.೫೯ | ೪೦.೫೦ |
| ೩೭ | ಖೋತವಾಡಿ (ಪಾಂಡೆಗಾಂವ) | ೧೧.೪೭ | ೫೯.೮೯ |
| ೩೮ | ಪಾರ್ಥನಹಳ್ಳಿ ಬ್ಯಾರೇಜ್ | ೬.೫೦ | ೪೧.೦೦ |
| ೩೯ | ಮಂಗಸೂಳಿ ಬಂದಾರ | ೮.೯೦ | ೪೦.೦೦ |
| | | **ಒಟ್ಟು** | **೬೦೧೪.೭೬** |

**೫. ಅಥಣಿ ತಾಲೂಕಿನಲ್ಲಿ ಬರುವ ಒಟ್ಟು ಕಿಂಡಿಆಣೆಕಟ್ಟು/ಎಸ್‌ಡಬ್ಲೂಇಡಿ ವಿವರ.**

| ಅ ನಂ | ಸಣ್ಣ ನೀರಾವರಿ ಯೋಜನೆಗಳ ಹೆಸರು | ಗ್ರಾಮ | ಅಚ್ಚುಕಟ್ಟು |
|---|---|---|---|
| ೧ | ಬುರ್ಲಟ್ಟಿ ಬ್ರಿಡ್ಜ ಪ್ಲ್ಯಾಂಕಿಂಗ ಅರೇಂಜಮೇಟ್ | ಬುರ್ಲಟ್ಟಿ | ೪೦.೦೦ |
| ೨ | ಅಬ್ಬಿಹಾಳ ಬ್ರಿಡ್ಜ ಪ್ಲ್ಯಾಂಕಿಂಗ ಅರೇಂಜಮೇಟ್ | ಅಬ್ಬಿಹಾಳ | ೧೮.೦೦ |
| ೩ | ಮಲಾಬಾದ ಬ್ರಿಡ್ಜ ಪ್ಲ್ಯಾಂಕಿಂಗ ಅರೇಂಜಮೇಟ್ | ಮಲಾಬಾದ | ೧೮.೦೦ |
| | | **ಒಟ್ಟು** | **೭೬.೦೦** |

ಅಭಿವೃದ್ಧಿ ಅಧ್ಯಯನ ವಿಭಾಗದಲ್ಲಿ

ಎಂ. ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಸಾದರ ಪಡಿರುವ

ಸಂಶೋಧನಾ ಸಂಪ್ರಬಂಧದ ಛಾಯಾ ಚಿತ್ರಗಳು

೧ ನೀರಿನ ಮೂಲಗಳು






# ಗ್ರಂಥ ಋಣ


೧. ಇದು ನಮ್ಮ ಕರ್ನಾಟಕ : ರಾ. ನಂ ಚಂದ್ರಶೇಖರ.
ನವ ಕರ್ನಾಟಕ ಪ್ರಕಾಶನ, ಬೆಂಗಳೂರು-೨೦೦೫

೨. ಭಾರತದ ಆರ್ಥಿಕ ಅಭಿವೃದ್ಧಿ : ಡಾ. ಎಚ್.ಆರ್. ಕೃಷ್ಣಮೂರ್ತಿ
ಸ್ವಪ್ನಾ ಬುಕ ಹೌಸ್, ಬೆಂಗಳೂರು-೨೦೧೫

೩. ಭಾರತದ ಆರ್ಥಿಕ ಅಭಿವೃದ್ಧಿ : ಎಚ್ಚಾರ್ಕೆ
ಸ್ವಪ್ನಾ ಬುಕ ಹೌಸ್, ಬೆಂಗಳೂರು-೨೦೧೨

೪. ಕರ್ನಾಟಕ ಆರ್ಥಿಕಾಭಿವೃದ್ಧಿ : ಎಚ್ಚಾರ್ಕೆ
ಸ್ವಪ್ನಾ ಬುಕ ಹೌಸ್, ಬೆಂಗಳೂರು-೨೦೧೫

೫. ಕರ್ನಾಟಕ ಸಂಗಾತಿ : ಸಂ ಡಾ. ಎಚ್.ಚಂದ್ರಶೇಖರ
ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು-೨೦೧೩


# ಪತ್ರಿಕೆ


೧. ಶರದ್ ಕೃಷಿ (ಮಾಸ ಪತ್ರಿಕೆ) : ಸಂ. ಶರದ್ ಪವಾರ
ಜುಲೈ-೨೦೧೪,

೨. ಸಹಕಾರ (ಮಾಸ ಪತ್ರಿಕೆ) : ಶ್ರೀ ಬಸವರಾಜ ತಳೇವಾಡ
ಕರ್ನಾಟಕ ಸಹಕಾರ ಮಹಾಮಂಡಳ
ಬೆಂಗಳೂರು.೪ ಜನೇವರಿ-೨೦೧೫

೩. ಕನ್ನಡ ನುಡಿ : ಸಂ ಡಾ. ಕಾಂತರಾಜುಪುರ ಸುರೇಶ್
ಆರ್ ವಸಂತ್‌ಕುಮಾರ
ಕನ್ನಡ ಸಾಹಿತ್ಯ ಪರಿಷತ್ತು, ಜನೇವರಿ.
ಮಾರ್ಚ-೨೦೧೫

೪. ಸಣ್ಣ ನೀರಾವರಿ (ವಾರ್ಷಿಕ ವರದಿ): ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)
ಕರ್ನಾಟಕ ಸರಕಾರ. ೨೦೧೩-೧೪

೫. ಅಂಕಿ ಅಂಶಗಳ ನೋಟ : ಜನಗಣತಿ-೨೦೧೧

೬. ಅಭಿವೃದ್ಧಿ ಅಧ್ಯಯನ : ಪ್ರಸಾರಂಗ
ಕನ್ನಡ ವಿಶ್ವವಿದ್ಯಾಲಯ ವಿದ್ಯಾರಣ್ಯ, ಹಂಪಿ

# ಅಂತರ್ಜಾಲ

1. http://waterresources.kar.nic.in/irri_in_kar.htm
2. http://www.knnlindia.com/
3. http://www.karnatakatenders.in/
4. http://minorirrigation.up.nic.in/
5. http://waterresources.kar.nic.in/index.asp

